ವಾಗ್ಭೂಷಣ ಗ್ರಂಥಮಾಲೆ ಸಂಖ್ಯೆ....೮೫

# ಭೀಷ್ಮಾಚಾರ್ಯ



೧೯೨೮

ಲೇಖಕ :–

ಮ. ಪ್ರ. ಪೂಜಾರ.

ಬೆಲೆ ೫ ಆಣೆ

ಪ್ರಾಥಮಿಕ ಶಾಲೆಗಳ ಮೇಲಿನ ಇಯತ್ತೆಗಳ ಮತ್ತು ಹಾಯಸ್ಕೂಲುಗಳ

ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಶ್ರೀಯುತ ಮ ಪ್ರ. ಪೂಜಾರ ಇವರು ರಚಿಸಿದ

# ಕನ್ನಡ ನುಡಿಗನ್ನಡಿ

ಎಂಬ ವ್ಯಾಕರಣ ಗ್ರಂಥವೂ ಮತ್ತು ಸದ್ಗುಣಾದರ್ಶ

ಎಂಬ ಕಥೆಗಳ ಪುಸ್ತಕವೂ ಅಚ್ಚಿನಲ್ಲಿವೆ.

ಬೇಕಾದವರು ತರಿಸಿಕೊಳ್ಳಬಹುದು.

ಮುದ್ರಕಃ- ಅಣ್ಣಾಚಾರ್ಯ ಬಾಳಾಚಾರ್ಯ ಹೊಸಕೇರಿ.

ಮುದ್ರಣಸ್ಥಳಃ- ವಿಜಯ ಪ್ರೆಸ್ ಧಾರವಾಡ

ಪ್ರಕಾಶಕಃ- ಮ ಪ್ರ. ಪೂಜಾರ

ವಾಗ್ಭೂಷಣ ಗ್ರಂಥಮಾಲೆ ಸಂಖ್ಯೆ....೮೫

# ಭೀಷ್ಮಾಚಾರ್ಯ



೧೯೨೮

ಲೇಖಕ :

ಮ. ಪ್ರ. ಪೂಜಾರ.

ಬೆಲೆ ೫ ಆಣೆ

# ಭೀಷ್ಮಾಚಾರ್ಯ



## (೧)



ನಮ್ಮ ದೇಶದ ಉತ್ತರಕ್ಕೆ ಹಿಮಾಲಯವೆಂಬ ಮಹಾ ಪರ್ವತವುಂಟು. ಭೂಮಿಯ ಮೇಲಿನ ಎಲ್ಲ ಪರ್ವತಗಳಿಗಿಂತ ಹೆಚ್ಚಿಗೆ ಎತ್ತರವಾಗಿರುವದರಿಂದಲೂ ಹೆಚ್ಚಿಗೆ ಮಹಿಮೆಯನ್ನು ಹೊಂದಿರುವದರಿಂದಲೂ ಅದು ಗಿರಿರಾಜನೆಂದೆನಿಸಿಕೊಂಡಿದೆ. ಈ ಹಿಮಾಲಯವು ದೇವಗಂಧರ್ವಾದಿಗಳಿಗೆ ವಿಲಾಸಸ್ಥಾನವಾಗಿಯೂ, ತಪಸ್ವಿಗಳಿಗೆ ತಪೋವನವಾಗಿಯೂ ಇರುವದು. ಇದರ ಕೆಳಗಡೆಯಲ್ಲಿ ದೊಡ್ಡ ದೊಡ್ಡ ಬನಗಳು ಹಬ್ಬಿರುವವು. ಮೇಲಕ್ಕೆ ಹೋದಂತೆ ಹಚ್ಚಗೆ ಕಂಗೊಳಿಸುವ ಹುಲ್ಲೂ, ಹೂವನೆಯೂ ಬೆಳೆದಿರುವವು. ಎಲ್ಲಕ್ಕೂ ಮೇಲ್ಗಡೆಗೆ ಶಿಖರಗಳಲ್ಲಿ ಶುಭ್ರವಾದ ಹಿಮವು ಕವಿಸಿರುವದು. ಇದರಿಂದ ಆ ಗಿರಿರಾಜನು ಮೈ ಮೇಲೆ ಹಸಿರು ಬಣ್ಣದ ಶಾಲನ್ನು ಹೊದೆದುಕೊಂಡು ತಲೆಗೆ ಬಿಳಿಯ ಪಾಗನ್ನು ಸುತ್ತಿಕೊಂಡಂತೆ ಒಪ್ಪುವನು. ಕಂದರಗಳಲ್ಲಿ ನೂರಾರು ತೊರೆಗಳು ಕೆಳಗಡೆಗೆ ಹರಿಯುತ್ತಿರುವವು. ಚಿಗರೆ ಕಾಡಾಕಳುಗಳು ಕೆಳಗಿನ ಬನಗಳಲ್ಲಿ ಆನಂದದಿಂದ ಸಂಚರಿಸುವವು

ಈ ಮೇರೆಗೆ ಮನೋಹರವಾದ ಆ ಗಿರಿರಾಜನ ತಪ್ಪಲಿನಲ್ಲಿ ಒಂದು ಕಡೆಗೆ ವಸಿಷ್ಠ ಮಹರ್ಷಿಯ ಆಶ್ರಮವಿತ್ತು. ಆ ಪುಣ್ಯಾಶ್ರಮದ ಸುತ್ತಲಿನ ತಪೋವನವು ಬಹು ಶಾಂತವೂ ರಮಣೀಯವೂ ಆಗಿತ್ತು. ದೇವತೆಗಳು ನಂದನವನವನ್ನೂ ಕೂಡ ಮರೆತು ಅಲ್ಲಿ ವಿಹರಿಸುವರು.

ಒಂದಾನೊಂದು ದಿವಸ ವಸುಗಳೆಂಬ ಎಂಟು ಜನ ದೇವತೆಗಳು ತಮ್ಮ ತಮ್ಮ ಹೆಂಡಂದಿರೊಡನೆ ಸ್ವರ್ಗಲೋಕದಿಂದ ವನವಿಹಾರಕ್ಕೋಸ್ಕರ ಆ ತಪೋ

ವನಕ್ಕೆ ಬಂದರು. ವಸಿಷ್ಠಋಷಿಯು ಆಗ ಆಶ್ರಮದಲ್ಲಿರಲಿಲ್ಲ. ವಸುಗಳು ತಪೋವನದ ಸೊಬಗನ್ನು ಕಂಡು ಮರುಳಾಗಿಹೋದರು. ಎಷ್ಟು ಹೊತ್ತು ತಿರುಗಾಡಿದರೂ ಅವರಿಗೆ ಸಾಕೆನಿಸಲಿಲ್ಲ.

ವಸಿಷ್ಠಋಷಿಯ ಆಶ್ರಮದಲ್ಲಿ 'ನಂದಿನಿ' ಎಂಬ ಗೋವು ಇತ್ತು. ಅದನ್ನು ಆತನು ಹೋಮಕ್ಕೆ ಬೇಕಾಗುವ ಹಾಲು ತುಪ್ಪಗಳಿಗಾಗಿ ಸಲಹಿದ್ದನು. ಅದು ಸ್ವರ್ಗದಲ್ಲಿರುವ ಕಾಮಧೇನುವಿನ ಪಳಿಯದು. ಅದರಷ್ಟು ಸುಲಕ್ಷಣವಾದ ಆಕಳು ಇನ್ನೆಲ್ಲಿಯೂ ಇರಲಿಲ್ಲ. ಚಂದವಾದ ಆ ಪಸುವನ್ನು ನೋಡಿದೊಡನೆ ವಸುಗಳಲ್ಲಿ ಎಲ್ಲಕ್ಕೂ ಚಿಕ್ಕವನಾದ 'ದ್ಯು' ಎಂಬವನ ಹೆಂಡತಿಗೆ ಮನದೊಳಗೆ ಹಿಡಿಸಲಾರದಷ್ಟು ಹರ್ಷವಾಯಿತು. ಆಗ ಅವಳು ತನ್ನ ಗಂಡನಿಗೆ-'ನನ್ನ ಜೀವದ ಗೆಳತಿಯಾದ ಜಿತವತಿಯು ಬಹಳ ದಿವಸಗಳ ತೊಟ್ಟು ಜೇನೆಯಿಂದ ಬಳಲುತ್ತಿರುವಳು. ಈ ಆಕಳ ಹಾಲನ್ನು ಕುಡಿದರೆ ಅವಳಿಗೆ ಖಂಡಿತವಾಗಿ ಗುಣವಾಗುವದು. ಆದದರಿಂದ ಹೋಗುವಾಗ ಇದನ್ನು ಸಂಗಡ ಒಯ್ಯುವ' ಎಂದಳು. ಉಳಿದ ವಸುಗಳಿಗೂ ನಂದಿನಿಯನ್ನೊಯ್ಯಬೇಕೆಂಬ ಮನಸ್ಸಾಗಿತ್ತು. 'ದ್ಯು'ವು ತನ್ನ ಮಡದಿಯ ಬಯಕೆಯನ್ನು ತೀರಿಸುವದಕ್ಕಾಗಿ ತನ್ನ ಅಣ್ಣಂದಿರ ಬೆಂಬಲದಿಂದ ನಂದಿನಿಯನ್ನೂ ಅದರ ಕರುವನ್ನೂ ಸ್ವರ್ಗಕ್ಕೆ ಹಿಡಿದುಕೊಂಡು ನಡೆದನು.

ಕೆಲಹೊತ್ತಿಗೆ ವಸಿಷ್ಠಋಷಿಯು ಆಶ್ರಮಕ್ಕೆ ಬಂದು ನೋಡುತ್ತಾನೆ-ಆಶ್ರಮದಲ್ಲಿ ನಂದಿನಿಯಿಲ್ಲ. ಅಷ್ಟವಸುಗಳು ವನವಿಹಾರಕ್ಕೆ ಬಂದು ಆಶ್ರಮದೊಳಗಿನ ಹೋಮಧೇನುವನ್ನು ಬಲುಮೆಯಿಂದ ಒಯ್ದಿರುವರೆಂಬುದು ಆ ಋಷಿಗೆ ಒಳನೋಟದಿಂದ ಕೂಡಲೆ ತಿಳಿಯಿತು. ಆಗ ಋಷಿಯ ಕಣ್ಣುಗಳು ಕೆಂಡದಂತಾದವು. ಒಡನೆಯೆ ಆತನು ವಸುಗಳಿಗೆ 'ಮನುಷ್ಯರಿಗೂ ಕೂಡ ಸಲ್ಲದ ಈ ಕೆಲಸವನ್ನು ಮಾಡಿದ ನೀವು ಮರ್ತ್ಯಲೋಕದಲ್ಲಿ ಮಾನವಜನ್ಮವನ್ನು ತಾಳಿರಿ' ಎಂದು ಶಾಪವಿತ್ತನು.

ವಸುಗಳು ಶಾಪಕ್ಕಂಜಿ ವಸಿಷ್ಠನ ಬಳಿಗೆ ಬಂದು ಬೇಕಾದಷ್ಟು ಹೇಳಿಕೊಂಡರು. ಋಷಿಯು ಈ ತಪ್ಪುಗಾರರ ಮೇಲೆ ದಯೆಯನ್ನು ತೋರಿಸಲಿಲ್ಲ. ಅವರು ಬಹಳ ಹೊತ್ತು ಅಂಗಲಾಚಿ ಬೇಡಿಕೊಂಡ ಬಳಿಕ ವಸಿಷ್ಠನು ತಮ್ಮಗಳಿರಾ' ಶಾಪವನ್ನು ಕೊಟ್ಟ ಬಳಿಕ ಅದನ್ನು ತಿರುಗಿಸಲಾರೆನು. ನೀವು ಮಾನವಲೋಕದಲ್ಲಿ ಹುಟ್ಟಲೇಬೇಕಾಗುವದು; ಆದರೆ ದೇವಗಂಗೆಯು ನಿಮ್ಮನ್ನು ಗರ್ಭದಲ್ಲಿ ಧರಿಸುವದಕ್ಕೊಪ್ಪಿದರೆ ಅಲ್ಪಾವಧಿಯಲ್ಲಿ ನೀವು ಮರಳಿ ಸ್ವರ್ಗಕ್ಕೆ ಬರಬಹುದು. ಆದರೆ ಈ ಅಲ್ಲದ ಕೆಲಸದಲ್ಲಿ ನಿಮ್ಮನ್ನು ಸೇರಿಸಿಕೊಂಡ, ದುರ್ದೈವಿಯಾದ ದ್ಯುವು ಮಾತ್ರ

ಹೆಚ್ಚು ಕಾಲ ಮರ್ತ್ಯಲೋಕವಾಸದ ಕಷ್ಟವನ್ನು ಅನುಭೋಗಿಸಬೇಕು" ಎಂದು ಹೇಳಿದನು. ಆಗ ವಸುಗಳು ದೇವಗಂಗೆಗೆ ಶರಣು ಹೋಗಿ-"ಅಮ್ಮಾ, ವಸಿಷ್ಠ ಋಷಿಯ ಶಾಪದಿಂದ ನಮ್ಮ ಮೇಲೆ ದೊಡ್ಡ ವಿಪತ್ತು ಬಂದಿರುವದು. ನಿನ್ನ ಒಲುಮೆಯಿಲ್ಲದೆ ಅದರಿಂದ ಪಾರುಗಾಣುವಂತೆ ಇಲ್ಲ; ಆದದರಿಂದಲೇ ನಿನ್ನ ಬಳಿಗೆ ಬಂದಿರುವೆವು. ದಯೆಯಿಟ್ಟು ನಮ್ಮನ್ನು ಸಲಹು. ಸುರನದಿಯು ಭೂಲೋಕಕ್ಕಿಳಿದು ನಿಮ್ಮನ್ನು ಗರ್ಭದಲ್ಲಿ ಧರಿಸಿದರೆ ನಿಮ್ಮ ಉದ್ಧಾರವಾಗುವದೆಂದು ವಸಿಷ್ಠಮುನಿಯು ಹೇಳಿರುವನು; ಅಮ್ಮಾ, ಮಾನವ ಜನ್ಮವನ್ನು ಹೊಂದಿಸುವ ಆ ಶಾಪದಿಂದ ನಮ್ಮ ಬಿಡುಗಡೆ ಮಾಡುವದಕ್ಕಾಗಿ ನೀನು ಭೂಲೋಕದಲ್ಲಿ ನಮ್ಮ ತಾಯಿಯಾಗಿ ಜನಿಸಬೇಕು; ಮತ್ತು ನಿನ್ನನ್ನು ಈಗಲೇ ಒಂದು ಮಾತಿಗಾಗಿ ಬೇಡಿಕೊಳ್ಳುವದೇನಂದರೆ-ನಾವು ನಿನ್ನ ಉದರದಿಂದ ಹುಟ್ಟಿದೊಡನೆ ನಮ್ಮನ್ನು ನಿನ್ನ ಪ್ರವಾಹದಲ್ಲಿ ಚೆಲ್ಲಿ ಕೊಡು. ನಮ್ಮ ಈ ಬೇಡಿಕೆಯನ್ನು ಪೂರ್ಣಮಾಡು" ಎಂದು ತಲೆವಾಗಿ ಕೇಳಿಕೊಂಡರು.

ವಸುಗಳ ಪ್ರಾರ್ಥನೆಯನ್ನು ಸುರನದಿಯು ಒಪ್ಪಿಕೊಂಡಳು.

---

(೨)

ಹಿಂದಿನ ಪ್ರಕರಣದಲ್ಲಿ ಹೇಳಿದ ಸಂಗತಿಯು ನಡೆದ ಕಾಲದಲ್ಲಿ ನಮ್ಮಾ ಭರತಖಂಡದಲ್ಲಿ "ಕುರು' ಎಂಬ ಪ್ರಸಿದ್ಧರಾಜನು ಆಗಿಹೋದನು. ಹಸ್ತಿನಾವತಿಯು ಆತನ ರಾಜಧಾನಿಯು. ಅವನ ವಂಶದಲ್ಲಿ ಪರಮಧಾರ್ಮಿಕನಾದ ಪ್ರತೀಪನೆಂಬ ರಾಜರ್ಷಿಯು ಉದಯಹೊಂದಿದನು. ಆ ಕಾಲದಲ್ಲಿ ಅವನಂತಹ ಪರಾಕ್ರಮಶಾಲಿಯಾದ ನರಪತಿಯು ಭರತಖಂಡದಲ್ಲಿ ಇನ್ನೊಬ್ಬನಿರಲಿಲ್ಲ. ಈ ಚಕ್ರವರ್ತಿಗೆ ದೇವಾಪಿ, ಶಂತನು, ಬಾಹ್ಲೀಕ ಎಂಬ ಮೂವರು ಮಕ್ಕಳಾದರು. ದೇವಾಪಿಯು ಬಾಲ್ಯದಲ್ಲಿಯೇ ತಪಸ್ಸಿಗಾಗಿ ಅಡವಿಗೆ ತೆರಳಲು ಪ್ರತೀಪನು ಶಂತನುವಿಗೆ ರಾಜ್ಯಭಾರವನ್ನೊಪ್ಪಿಸಿ ತಾನೂ ತಪಸ್ಸಿಗೆ ನಡೆದನು.

ಇತ್ತ ಶಂತನುಮಹಾರಾಜನು ಪಟ್ಟದ ಮೇಲೆ ಕುಳಿತು ಚೆನ್ನಾಗಿ ರಾಜ್ಯವಾಳತೊಡಗಿದನು. ಅವನ ಆಳಿಕೆಯಲ್ಲಿ ಪ್ರಜೆಗಳ ಸುಖವು ಹೆಚ್ಚಿತು. ದೇಶದ ಸಂಪತ್ತು ಬೆಳೆಯಿತು ಎಲ್ಲಾ ಕಡೆಗೆ ಸತ್ಕಾರ್ಯಗಳು ನಡೆಯತೊಡಗಿದವು. ಎಲ್ಲಿ ನೋಡಿದರೂ ಶಾಂತಿಯೂ ಸದಾಚಾರವೂ ನೆಲೆಗೊಂಡವು.

ಶಂತನುಮಹಾರಾಜನು ಬೇಟೆಗೆ ಮೆಚ್ಚಿದವನು. ದಿನಾಲು ಅಡವಿಗೆ ಹೋಗಿ ಹಲವು ಕ್ರೂರ ಮೃಗಗಳನ್ನು ಕೆಡಹುವನು. ಒಂದು ದಿವಸ ಬೇಟೆಯಾಡುತ

ಅರಣ್ಯದಲ್ಲಿ ಬಹುದೂರ ಹೋದನು. ಸಂಗಡಿಗರು ಎಲ್ಲಿಯೋ ಉಳಿದುಬಿಟ್ಟರು. ಬೇಟೆಯಾಡಿ ದಣಿದ ಬಳಿಕ ಮಹಾರಾಜನು ತನ್ನ ಜನರನ್ನು ಬಹಳ ಹೊತ್ತು ಹುಡುಕಿದನು. ಯಾರೂ ಕಾಣಿಸಲಿಲ್ಲ. ತಾನು ಎತ್ತಿಂದ ಎತ್ತ ಬಂದೆನೆಂಬದು ಅವನಿಗೆ ತಿಳಿಯದಂತಾಯಿತು. ಕಡೆಗೆ ಮುಂಗಾಣದೆ ಆತನು ಹಾಗೆಯೇ ಸಾಗುತ್ತ ಸಾಗುತ್ತ ಭಾಗೀರಥೀನದಿಯ ದಂಡೆಗೆ ಬಂದುಹತ್ತಿದನು. ಅಲ್ಲಿ ಒಂದು ಅದ್ಭುತವಾದ ಪ್ರಸಂಗವು ಒದಗಿತು:—

ನದಿಯ ದಂಡೆಯ ಮೇಲೆ ವಿಲಕ್ಷಣ ಸೌಂದರ್ಯವುಳ್ಳ ಒಬ್ಬ ಪ್ರಾಯದ ಹೆಂಗುಸು ಅರಸನ ಕಡೆಗೇ ನೋಡುತ್ತ ನಿಂತಿರುವಳು ಆ ಸ್ತ್ರೀಯ ಮುಖದ ಗಂಭೀರಭಾವವನ್ನೂ ವಿಲಕ್ಷಣ ಕಾಂತಿಯನ್ನೂ ನೋಡಿದೊಡನೆ ಈಕೆ ಮಾನವ ಸ್ತ್ರೀಯಲ್ಲವೆಂದೆನಿಸುತ್ತಿತ್ತು. ಮತ್ತೆ ಮತ್ತೆ ನೋಡಿದರೂ ಸಾಕೆನಿಸದಂತಹ ಆ ಸೌಂದರ್ಯದ ಖನಿಯನ್ನು ನೋಡಿ ಅರಸನು ಬೆರಗಾಗಿ ಇವಳೇನು ದೇವಕನ್ನಿಕೆಯೋ ನಾಗಕನ್ನಿಕೆಯೋ ಎಂದು ಸಂಶಯಬಡುತ್ತ ಮೆಲ್ಲನೆ ಮುಂದೆ ಸಾಗುತ್ತ ಆಕೆಯ ಸಮೀಪಕ್ಕೆ ಬಂದನು. ಆಗ ಅವನು ಮೋಹಪರವಶನಾಗಿ ಮರ್ಯಾದೆಯನ್ನು ಮೀರಿ ಆಕೆಗೆ ' ಎಲೈ ಭಾಮಿನೀ, ನೀನು ವಿವಾಹಿತೆಯಲ್ಲವಾಗಿದ್ದರೆ ನನ್ನನ್ನು ವರಿಸುವೆಯಾ ' ಎಂದು ಕೇಳಿದನು.

ಆಗ ಆ ಸ್ತ್ರೀಯು— ಮಹಾರಾಜರೇ, ನನ್ನದೊಂದು ಮಾತನ್ನು ನಡೆಸುವಿರಾದರೆ ನಿಮ್ಮನ್ನು ವರಿಸುವೆನು, ಆ ಮಾತೇನಂದರೆ– ನಾನು ತಮ್ಮ ಬಳಿಯಲ್ಲಿರುವಾಗ ನಾನು ನನ್ನ ಇಚ್ಛೆಯಂತೆ ಕೆಲಸಗಳನ್ನು ಮಾಡುವೆನು; ಅದಕ್ಕೆ ನೀವು ಅಡ್ಡಿಯ ಮಾಡಬಾರದು. ಅಡ್ಡಿಯಾಗುವಂತೆ ನೀವು ಮಾತನ್ನಾಡಿದ ದಿವಸವೇ ನಾನು ನಿಮ್ಮ ಕಣ್ಮರೆಯಾಗಿ ಹೋಗಿಬಿಡುವೆನು. ನನ್ನ ಈ ಮಾತನ್ನು ನಡೆಸುವೆನೆಂದು ವಚನಕೊಟ್ಟರೆ ತಮ್ಮನ್ನು ವರಿಸುವೆನು ಎಂದು ನುಡಿದಳು.

ಉಪಾಯವೇನೂ ತೋರಲಿಲ್ಲ. ಆ ದಿವ್ಯಸ್ತ್ರೀಗೆ ಮೆಚ್ಚಿದ ಅರಸನು ವಿಚಾರ ಮಾಡದೆ ಆ ಮಾತಿಗೆ ಒಪ್ಪಿ ಆಕೆಯನ್ನು ಸಂಗಡ ಕರೆದುಕೊಂಡು ರಾಜಧಾನಿಗೆ ಬಂದನು. ವಸುಗಳ ಪ್ರಾರ್ಥನೆಗೆ ಒಪ್ಪಿಕೊಂಡು ದೇವಗಂಗೆಯು ಮಾನವ ಸ್ತ್ರೀಯಾಗಿ ಶಂತನು ಮಹಾರಾಜನನ್ನು ವರಿಸಿ ಆತನ ಪಟ್ಟದರಸಿಯೆನಿಸಿಕೊಂಡಳು. ಆಕೆಯು ಸಮಾಗಮದಿಂದ ಶಂತನು ಮಹಾರಾಜನು ಸುಖದಿಂದ ಕಾಲ ಕಳೆಯಲಾರಂಭಿಸಿದನು.

ಕೆಲವು ದಿವಸಗಳು ಹೋದವು. ಅರಸಿಯು ಬಸಿರಾದಳು. ಅರಸನ ಮನಸ್ಸಿಗೆ ಅಪಾರವಾದ ಆನಂದವಾಯಿತು. ಕ್ರಮವಾಗಿ ನವಮಾಸಗಳು ತುಂ

ಬಲು ಅರಸಿಯು ಸರ್ವಲಕ್ಷಣ ಸಂಪನ್ನವಾದ ಒಂದು ಗಂಡುಕೂಸನ್ನು ಹೆತ್ತಳು. ಎಲ್ಲರೂ ಆನಂದಸಾಗರದಲ್ಲಿ ಮುಳುಗಿದರು. ರಾಜಧಾನಿಯಲ್ಲಿ ಮಹೋತ್ಸವವು ವಿಜ್ರಂಭಣೆಯಿಂದ ನಡೆಯಿತು.

ಸ್ವಲ್ಪ ವೇಳೆಯಲ್ಲಿ ಒಮ್ಮಿಂದೊಮ್ಮೆ ಈ ಉತ್ಸವದ ಕೋಲಾಹಲವೆಲ್ಲ ನಿಂತು ಹೋಯಿತು. ಬಾಣತಿಯು ಹೆತ್ತ ಕೂಸನ್ನು ನದಿಯಲ್ಲಿ ಚೆಲ್ಲಿಬಿಟ್ಟಳೆಂಬ ವರ್ತಮಾನವು ಎಲ್ಲ ಕಡೆಗೆ ಹಬ್ಬಿತು. ಅರಸಿಯು ಈ ಮೇರೆಗೆ ಮಾಡಿದಳೆಂಬದನ್ನು ಕೇಳಿ ಅರಸನು ಬೆರಗಾದನು. ಮೊದಲು ಕೊಟ್ಟ ವಚನವನ್ನು ನೆನೆದು ಉಪಾಯವಿಲ್ಲದೆ ಯಾವ ಮಾತನ್ನೂ ಆಡದೆ ಸುಮ್ಮನೆ ಇದ್ದು ಮನಸ್ಸಿನ ದುಃಖವನ್ನು ಹೊರಗೆ ತೋರಗೊಡದೆ ಒಳಗೇ ನುಂಗಿಕೊಂಡನು. ಹೀಗೆ ಕೆಲವು ಕಾಲವು ಹೋಗುತ್ತಿರಲು ಗಂಗೆಯು ಮತ್ತೆ ಗರ್ಭಿಣಿಯಾದಳು. ಮತ್ತೆ ತಕ್ಕ ಕಾಲಕ್ಕೆ ಗಂಡುಮಗನನ್ನು ಹಡೆದಳು. ಮತ್ತೆ ಎಲ್ಲರಿಗೂ ಹರ್ಷವಾಯಿತು ಆದರೆ ಮತ್ತೆ ತಾಯಿಯು ಕೂಸನ್ನು ನದಿಯಲ್ಲಿ ಚೆಲ್ಲಿಬಿಟ್ಟದ್ದರಿಂದ ಎಲ್ಲ ಕಡೆಗೂ ದುಃಖವೇ ತೋರಹತ್ತಿತು. ಅರಸನು ಈಗಲೂ ಹೆಂಡತಿಯ ವಿರುದ್ಧವಾಗಿ ಏನೂ ಮಾತಾಡಲಿಲ್ಲ. ಈ ಮೇರೆಗೆ ಏಳು ಕೂಸುಗಳು ಗತಿಸಿದವು.

ಅರಸನು ಬಹಳ ನೊಂದುಕೊಂಡನು. ತಾನು ವಚನಕೊಟ್ಟದ್ದು ಬಹಳ ಅನುಚಿತವಾಯಿತೆಂದು ಈಗ ಆತನಿಗೆ ತೋರಿತು. ರಾಣಿಯು ಮತ್ತೆ ಗರ್ಭಿಣಿಯಾದಳು. ಇದು ಎಂಟನೆಯ ಸರತಿಯು. ಈ ಸಾರೆ ಹುಟ್ಟುವ ಕೂಸನ್ನು ಹೇಗಾದರೂ ಮಾಡಿ ಬದುಕಿಸಿಕೊಳ್ಳಬೇಕೆಂದು ಅರಸನು ತನ್ನ ಮನಸ್ಸಿನೊಳಗೆ ನಿರ್ಧರಿಸಿಕೊಂಡನು. ಮಕ್ಕಳ ದುಃಖದಿಂದ ಅರಸನ ಮನಸ್ಸಿಗೆ ಬಹಳ ಅಸಮಾಧಾನವಾದದ್ದರಿಂದ ಈ ಸಾರೆ ಕೂಸನ್ನು ಉಳಿಸಿಕೊಳ್ಳಲೇಬೇಕೆಂದು ಆತನು ಮೊದಲಿನಿಂದಲೇ ಎಚ್ಚರಪಡಹತ್ತಿದನು. ಇದನ್ನು ನೋಡಿ ಗಂಗೆಯು ಒಳಗೊಳಗೆ ನಗುತ್ತಿದ್ದಳು.

ದಿನಗಳು ತುಂಬಲು ರಾಣಿಯು ಮತ್ತೆ ಗಂಡು ಕೂಸನ್ನು ಹಡೆದಳು. ಎಂದಿನಂತೆ ಆಕೆಯು ಈ ಕೂಸನ್ನೂ ತೆಗೆದುಕೊಂಡು ನದಿಯ ಕಡೆಗೆ ಹೊರಟಳು. ಇದನ್ನು ನೋಡಿದ ಬಳಿಕ ಶಂತನು ಮಹಾರಾಜನು ಸುಮ್ಮನಿರಲಾರದೆ ತಾನು ಆಕೆಯ ಬೆನ್ನ ಹಿಂದೆ ಹೊರಟನು. ಹೊಟ್ಟೆಯಲ್ಲಿ ಹುಟ್ಟಿದ ಕೂಸನ್ನು ನೀರಲ್ಲಿ ಚೆಲ್ಲುವದನ್ನು ಕಣ್ಣಾರೆ ಕಂಡು ಯಾವ ತಂದೆಯು ತಾಳಿಕೊಂಡಾನು? ಪುತ್ರಶೋಕದಿಂದ ಹಲವು ಸಾರೆ ನೊಂದುಕೊಂಡ ಅರಸನು ರಾಣಿಗೆ ಆಜ್ಞೆಯ ಮಾಡಬೇಕೆಂದು ನಿಶ್ಚಯಿಸಿಕೊಂಡಿದ್ದನು. ಹೆಂಡತಿಯು ಕೂಸನ್ನು ನೀರಲ್ಲಿ ಚೆಲ್ಲಿಕೊಡುವ ಸಮಯಕ್ಕೆ ಹತ್ತರ

ಹೋಗಿ– 'ಎಲೆ, ಕೂಸನ್ನು ನೀರಲ್ಲಿ ಒಗೆಯಬೇಡ' ಎಂದು ನಿಷ್ಠುರವಾಗಿ ಹೇಳಿದನು.

ಆಗ ರಾಣಿಯು:— ಮಹಾರಾಜರೇ, ತಮ್ಮ ಅಪ್ಪಣೆಯಂತೆ ಈ ಕೂಸನ್ನು ಉಳಿಸುವೆನು; ಚೆಲ್ಲುವದಿಲ್ಲ. ಆದರೆ ಈ ದಿವಸ ನೀವು ನನ್ನ ಕೆಲಸಕ್ಕೆ ಅಡ್ಡಿಯಾದುದರಿಂದ ನಿಮ್ಮಿಂದ ನಾನು ಮೊದಲೇ ವಚನ ತೆಗೆದುಕೊಂಡ ಮೇರೆಗೆ ಈಗಲೇ ನಿಮ್ಮ ಬಳಿಯಿಂದ ಹೊರಟು ಹೋಗುವೆನು. ಈವರೆಗೆ ನಿಮ್ಮ ಸನ್ನಿಧಿಯಲ್ಲಿ ಬಹಳ ಸುಖದಿಂದ ಇದ್ದೆನು. ಆದುದರಿಂದ ನನ್ನ ಎಲ್ಲ ವೃತ್ತಾಂತವನ್ನು ನಿಮಗೆ ಅರುಹ ಬೇಕೆಂದಿರುವೆನು. ಮಹಾರಾಜರೇ, ದುಃಖಿಸಬೇಡಿರಿ, ನಾನು ದೇವಲೋಕದ ಗಂಗೆಯು. ವಸುಗಳು ವಸಿಷ್ಠ ಋಷಿಯು ಶಾಪದಿಂದ ಮನುಷ್ಯಲೋಕದಲ್ಲಿ ಜನ್ಮತಾಳಬೇಕಾಗಿತ್ತು. ಮಾನವ ಸ್ತ್ರೀಯರು ಆ ಮಹಾತೇಜಸ್ವಿಗಳನ್ನು ಗರ್ಭದಲ್ಲಿ ಧರಿಸುವದು ಶಕ್ಯವಿರಲಿಲ್ಲ. ನಾನು ಧರಿಸಬಹುದೆಂದು ವಸಿಷ್ಠಋಷಿಯು ವಸುಗಳಿಗೆ ಹೇಳಿದುದರಿಂದ ಅವರು ನನ್ನನ್ನು ಬೇಡಿಕೊಂಡರು. ನಾನು ಅವರ ಮಾತಿಗೆ ಒಪ್ಪಿ ಅವರಿಗೆ ಮನುಷ್ಯ ಜನ್ಮವನ್ನು ಕೊಟ್ಟು ಶಾಪದಿಂದ ಬಿಡುಗಡೆ ಮಾಡಿ, ಈಗ ಸ್ವಸ್ಥಾನಕ್ಕೆ ನಡೆದಿರುವೆನು- ಮನುಷ್ಯನು ತನ್ನ ಕರ್ಮದ ಫಲವನ್ನು ಅನುಭವಿಸುವನು. ಶೋಕಮಾಡುವದರಿಂದ ಫಲವಿಲ್ಲ ವಸುಗಳಲ್ಲಿ ಎಲ್ಲಕ್ಕೂ ಚಿಕ್ಕವನಾದ ' ದ್ಯು ' ಎಂಬವನ ತಪ್ಪಿನಿಂದ ಅವರೆಲ್ಲರಿಗೆ ಶಾಪವು ತಟ್ಟಿದುದರಿಂದ ಆತನು ಮಾತ್ರ ಬಹುಕಾಲ ಮಾನವ ಜನ್ಮದಲ್ಲಿರಬೇಕಾಗುವದು. ಆ ' ದ್ಯು ' ಎಂಬವನೇ ಈ ಎಂಟನೆಯ ಶಿಶುವಾಗಿ ಹುಟ್ಟಿರುವನು. ಇವನು ಬಹುಕಾಲ ಈ ಲೋಕದಲ್ಲಿದ್ದು ನಿಮ್ಮ ವಂಶಕ್ಕೆ ಮೇಲನ್ನುಂಟುಮಾಡುವನು.

ಇಷ್ಟು ಮಾತುಗಳನ್ನು ಹೇಳಿ ಗಂಗೆಯು ಮಗನನ್ನು ಕಟ್ಟಿಕೊಂಡು ಅದೃಶ್ಯಳಾಗಿ ಹೊರಟು ಹೋದಳು.

—:೦:—

(೨)

ಶಂತನು ಮಹಾರಾಜನು ವಿವೇಕಿಯು; ಅತ್ಯಂತ ಧರ್ಮಿಷ್ಠನು; ಪ್ರಜಾರಂಜನದಿಂದಲೇ ರಾಜನೆಂಬ ಹೆಸರು ಒಪ್ಪುವದೆಂಬದನ್ನು ಬಲ್ಲನು. ಆತನ ಉತ್ತಮವಾದ ಆಳಿಕೆಯಿಂದ ರಾಜ್ಯವು ಬಹಳ ಮೇಲನ್ನು ಹೊಂದಿತು. ರಾಜ್ಯದಲ್ಲಿ ಸುಖಶಾಂತಿ ಸಮೃದ್ಧಿಗಳು ನೆಲಸಿದವು. ಪ್ರಜೆಗಳ ಹಿತವೇ ತನ್ನ ಹಿತವೆಂದು ತಿಳಿದುಕೊಂಡು ಅವರು ಹೇಳಿಕೊಳ್ಳುವದನ್ನು ಸಮಾಧಾನದಿಂದ ಕೇಳಿಕೊ

ಳ್ಳುತ್ತ. ಧರ್ಮನಿಷ್ಠನಾಗಿ ಪ್ರಜೆಗಳನ್ನು ಸನ್ಮಾರ್ಗದಲ್ಲಿ ಮುಂದುವರಿಸುತ್ತ ಶಾಂತ ತನದಿಂದ ರಾಜ್ಯವಾಳುತ್ತಿದ್ದನು. ಕ್ರಮದಿಂದ ಗಂಗೆಯ ವಿರಹದಿಂದಾದ ವ್ಯಥೆಯನ್ನು ಮರೆತನು. ಹೀಗೆ ಕೆಲವು ವರ್ಷಗಳು ಸಂದುಹೋದವು.

ಒಂದಾನೊಂದು ದಿವಸ ರಾಜನು ಬೇಟೆಗೆ ಹೋದಾಗ ಬಾಣವು ತಗಲಿದ ಒಂದು ಜಿಗರೆಯು ಓಡುತ್ತಿರಲು ತಾನೂ ಅದನ್ನು ಬೆನ್ನಟ್ಟುತ್ತ ಗಂಗಾನದಿಯ ದಂಡೆಯವರೆಗೆ ಬಂದನು. ಅಲ್ಲಿ ಅತ್ಯಂತ ತೇಜಸ್ವಿಯಾದ ಒಬ್ಬ ಬಾಲಕನು ಬಾಣ ಪ್ರಯೋಗಮಾಡಿ ನದಿಯ ಪ್ರವಾಹವನ್ನು ತಡೆದು ನಿಲ್ಲಿಸುತ್ತಿರುವದು ಅವನ ಕಣ್ಣಿಗೆ ಬಿತ್ತು. ಆತನ ಬಾಣಪ್ರಯೋಗ ಕ್ರಮವನ್ನು ನೋಡಿ ಅರಸನು ಬೆರಗಾದನು. ಇಂತಹ ವೀರ ಬಾಲಕನು ಯಾರಾಗಿರಬಹುದೆಂದು ಯೋಚಿಸುತ್ತ ಅವನು ಆ ಬಾಲಕನ ಸನಿಯಕ್ಕೆ ನಡೆದನು.

ಬಾಲಕನು ರಾಜನನ್ನು ನೋಡಿದ ಕೂಡಲೆ ಅದೃಶ್ಯನಾದನು. ಈ ಚಮತ್ಕಾರವನ್ನು ಕಂಡು ಅರಸನು ಚಕಿತನಾಗಿ ಮುಂಗಾಣದೆ ಅಲ್ಲಿಯೇ ನಿಂತುಬಿಟ್ಟನು. ಈ ಸಮಯಕ್ಕೆ ಗಂಗೆಯು ಬಾಲಕನನ್ನು ಸಂಗಡ ಕರೆದುಕೊಂಡು ತಾನೇ ಬಂದು ಅರಸನನ್ನು ಕುರಿತು— 'ಮಹಾರಾಜರೇ ಈತನು ತಮ್ಮ ಮಗನು. ಈ ವರೆಗೆ ಚೆನ್ನಾಗಿ ಸಲಹಿದೆನು. ವಸಿಷ್ಠ ಬೃಹಸ್ಪತಿ ಪರಶುರಾಮ ಮೊದಲಾದ ಶ್ರೇಷ್ಠ ಗುರುಗಳು ಈತನಿಗೆ ವೇದ ವೇದಾಂಗ ಶಸ್ತ್ರಾಸ್ತ್ರ ವಿದ್ಯೆಗಳನ್ನು ಕಲಿಸಿರುವರು. ವಿದ್ಯಾವಂತನೂ ಗುಣವಂತನೂ ಆದ ನಮ್ಮ ಮಗನನ್ನು ಕರೆದುಕೊಂಡು ಹೋಗಿರಿ' ಎಂದು ಹೇಳಿದಳು.

ಶಂತನುವು ಗಂಗೆಯು ಕೊಟ್ಟ ಆ ತೇಜಸ್ವಿಯಾದ ಮಗನನ್ನು ಕರೆದುಕೊಂಡು ರಾಜಧಾನಿಗೆ ಬಂದನು. ಅರಮನೆಯ ಶೋಭೆಯು ಹೆಚ್ಚಿತು. ಅರಸನ ಮತ್ತು ಆತನ ಪರಿವಾರದ ಆನಂದಕ್ಕೆ ಎಣೆಯಿಲ್ಲದಂತಾಯಿತು. ಶಂತನು ಮಹಾರಾಜನು ಈ ಮಗನಿಗೆ ದೇವವ್ರತನೆಂದು ಹೆಸರಿಟ್ಟನು.

ಅರಸುಮಗನು ಶುಕ್ಲಪಕ್ಷದ ಚಂದ್ರನಂತೆ ದಿನದಿನಕ್ಕೆ ಬೆಳೆಯಲಾರಂಭಿಸಿದನು. ವಿದ್ಯಾಬುದ್ಧಿ ರೂಪಗುಣಗಳಲ್ಲೆಲ್ಲ ತಂದೆಗೆ ತಕ್ಕ ಮಗನೆಂದು ಎಲ್ಲರೂ ಹೇಳುತ್ತಿರುವರು. ಕ್ರಮದಿಂದ ದೇವವ್ರತನು ದೊಡ್ಡವನಾದನು. ಅಷ್ಟಮಿಯ ಚಂದ್ರನಂತೆ ಅಗಲವಾದ ಆತನ ಹಣೆಯನ್ನೂ ಪೌರ್ಣಿಮೆಯ ಚಂದ್ರನಂತೆ ಕಾಂತಿಯುಳ್ಳ ಮುಖಮಂಡಲವನ್ನೂ ಕನ್ನೈದಿಲೆಯಂತೆ ಹೊಳಪುಳ್ಳ ಕಣ್ಣುಗಳನ್ನೂ ಅಗಲವಾದ ಎದೆಯನ್ನೂ ಎತ್ತರವಾದ ಹೆಗಲುಗಳನ್ನೂ 'ಹೊಳಕಾಲವರೆಗಿರುವ

ತೋಳಗಳನ್ನೂ ಭವ್ಯವಾದ ಆಕೃತಿಯನ್ನೂ ನೋಡಲು ಎಲ್ಲರಿಗೂ ಆನಂದವಾಗುವದು. ಆತನಲ್ಲಿ ವಿದ್ಯಾಬುದ್ಧಿಗಳು ಹೇಗೆ ಅಸಾಧಾರಣವಾಗಿ ಇದ್ದವೋ ಹಾಗೆಯೇ ಶಕ್ತಿಯೂ ಶಸ್ತ್ರಾಸ್ತ್ರ ಕೌಶಲ್ಯವೂ ಅಸಾಧಾರಣವಾಗಿಯೇ ಇದ್ದವು. ವಿನಯವೂ ಮನೋನಿಗ್ರಹವೂ ಆತನ ಮುಖದ ಮೇಲೆ ಒಡೆದು ಕಾಣುತ್ತಿದ್ದವು. ಎಲ್ಲ ವಿಷಯಗಳಲ್ಲಿ ಮಗನು ತಂದೆಯನ್ನು ಮೀರುವಂತಾದನು. ರಾಜ್ಯದಲ್ಲಿ ಎಲ್ಲರೂ ಈತನನ್ನು ಕೊಂಡಾಡುತ್ತಿದ್ದರು.

ದೇವವ್ರತನು ಪ್ರಾಯಕ್ಕೆ ಬಂದನು. ವಿದ್ಯಾವಿನಯ ಬಲಶೀಲಗಳಿಂದ ಮಗನು ಯೋಗ್ಯನಾಗಿರುವದನ್ನು ಕಂಡು ಶಂತನುಮಹಾರಾಜನು ಸಂತೋಷಬಟ್ಟು ಒಂದು ದಿವಸ ಬಹು ವಿಜೃಂಭಣೆಯಿಂದ ಆತನಿಗೆ ಯುವರಾಜಪಟ್ಟವನ್ನು ಕಟ್ಟಿದನು.

ದೇವವ್ರತನು ಯುವರಾಜನಾದ ಬಳಿಕ ತನ್ನ ಕರ್ತವ್ಯಗಳನ್ನು ಚೆನ್ನಾಗಿ ಮಾಡುತ್ತ ಎಲ್ಲರಿಗೂ ಬೇಕಾದನು. ಆತನು ಭಕ್ತಿಯಿಂದ ತಂದೆಯನ್ನೂ, ಹಿತದ ಕಾರ್ಯಗಳಿಂದ ಪ್ರಜೆಗಳನ್ನೂ ಪ್ರೀತಿಯಿಂದ ಕೈಕೆಳಗಿನವರನ್ನೂ ಒಲಿಸಿಕೊಂಡನು. ತನ್ನ ಪ್ರಜೆಗಳಿಗಾಗಿ ಪಡುವ ಕಷ್ಟವು ಆತನಿಗೆ ಕಷ್ಟವೆಂದೆನಿಸುತ್ತಿರಲಿಲ್ಲ. ಗುರುಗಳು, ಹಿರಿಯರು ಮೊದಲಾದ ಪೂಜ್ಯರನ್ನು ಪೂಜಿಸುವದು ಆತನ ಪ್ರೀತಿಯ ಕೆಲಸವು. ಇವೆಲ್ಲ ಸದ್ಗುಣಗಳಿಂದ ಪ್ರಜೆಗಳೂ ಮಂತ್ರಿಗಳೂ ಅಧಿಕಾರಿಗಳೂ ಯುವರಾಜನಲ್ಲಿ ಬಹಳ ಅನುರಾಗವುಳ್ಳವರಾಗಿದ್ದರು.

ಮಂತ್ರಿಗಳು ಮಹಾರಾಜರ ಬಳಿಯಲ್ಲಿ ಆಗಾಗ ಯುವರಾಜನ ಗುಣಗಳನ್ನು ವರ್ಣಿಸುವರು. ಮಹಾರಾಜನು ತನ್ನ ಮಗನ ವರ್ಣನೆಯನ್ನು ಕೇಳಿ ಮನದೊಳಗೆ ಬಹಳ ಹರ್ಷಬಡುವನು. ಪ್ರಜೆಗಳು ಯುವರಾಜನು ತಮ್ಮ ಕಲ್ಯಾಣ ಮಾಡುವವನೆಂದೂ, ಆಪದ್ಬಂಧುವೆಂದೂ ತಿಳಿದುಕೊಂಡು ಆತನ ವಿಷಯದಲ್ಲಿ ಬಹಳ ಆದರವನ್ನು ತೋರಪಡಿಸುವರು. ಶಂತನುಮಹಾರಾಜನೂ ಮಗನ ಯೋಗ್ಯತೆಯನ್ನರಿತು ರಾಜ್ಯಭಾರದ ಮಹತ್ವದ ಕೆಲಸಗಳಲ್ಲಿ ಒಂದೊಂದನ್ನೇ ಆತನಿಗೆ ಒಪ್ಪಿಸಿ ತಾನು ವಿಶ್ರಾಂತಿಯನ್ನು ಹೊಂದಲಾರಂಭಿಸಿದನು.

—:*:—

(೪)

ದೇವವ್ರತನು ರಾಜ್ಯಭಾರದ ಕಾರ್ಯಗಳನ್ನು ಬಹಳ ಮಟ್ಟಿಗೆ ತಾನೇ ವಹಿಸಿಕೊಂಡನು. ತಂದೆಯು ವಿಶ್ರಾಂತಿಯ ಸುಖದಲ್ಲಿರುವದನ್ನು ಕಂಡು ಅವನಿಗೆ

ಸಮಾಧಾನವಾಯಿತು. ಈ ಮೇರೆಗೆ ನಾಲ್ಕು ವರ್ಷಗಳು ಸಂದವು. ಒಂದಾ
ನೊಂದು ದಿವಸ ಶಂತನು ಮಹಾರಾಜನು ಯಮುನಾನದಿಯ ದಂಡೆಗುಂಟ
ತಿರುಗಾಡಲಿಕ್ಕೆ ಹೊರಟಿದ್ದನು. ಆಗ ಒಂದು ಅಪೂರ್ವವಾದ ಸುವಾಸನೆಯು
ಅವನ ಮೂಗಿಗೆ ಬಡಿಯಿತು. ಆ ಸುವಾಸನೆಯು ಕ್ಷಣಕ್ಷಣಕ್ಕೆ ಹೆಚ್ಚುತ್ತ, ನಡೆ
ಯಿತು. ಇಂಥಹ ಸುವಾಸನೆಯು ಎಲ್ಲಿಂದ ಹೊರಟಿರಬಹುದೆಂದು ಅತನು ಸು
ತ್ತಲು ನೋಡತೊಡಗಿದನು. ಸ್ವಲ್ಪ ಮುಂದೆ ಹೋಗುವಷ್ಟರಲ್ಲಿ ಒಬ್ಬ ಚಲುವೆ
ಯಾದ ಹುಡಿಗೆಯು ನದಿಯ ದಂಡೆಯ ಮೇಲೆ ಕಾಣಿಸಿದಳು. ಆ ಹುಡಿಗೆಯ
ಮೈಯ ವಾಸನೆಯೇ ಎಲ್ಲ ಕಡೆಗೆ ಇಡುಗಿರುವದೆಂಬುದು ತಿಳಿದ ಕೂಡಲೆ ಶಂತನು
ವು ಆಶ್ಚರ್ಯಪಟ್ಟನು. ಶಂತನುವು ಆ ಹುಡಿಗೆಯ ಅಸಾಧಾರಣವಾದ ಚಲ್ವಿಕೆ
ಗೆ ಮೋಹಗೊಂಡನು. ಎಷ್ಟೋ ಹೊತ್ತು ಆ ಸ್ತ್ರೀಯನ್ನು ನೋಡುತ್ತ ನಿಂತು
ಬಳಿಕ ಆಕೆಯ ಬಳಿಗೆ ಹೋಗಿ-- ಭದ್ರೇ, ನೀನಾರು? ಯಾರವಳು? ಇಲ್ಲಿ ಒಬ್ಬಳೇ
ಬಂದಿರುವ ಕಾರಣವೇನು? ಎಂದು ಕೇಳಿದನು. ಆಗ ಆಕೆಯು ತಲೆವಾಗಿ-- ನಾನು
ಅಂಬಿಗರ ಮಗಳು; ದಾಶರಾಜನು ನನ್ನ ತಂದೆಯು. ತಂದೆಯ ಅಪ್ಪಣೆಯಿಂದ
ಈ ನದಿಯಲ್ಲಿ ನಾವೆಯನ್ನು ನಡೆಸಿ ದಾರಿಕಾರರನ್ನು ದಾಟಿಸುತ್ತಿರುವೆನು,
ಎಂದಳು.

ರಾಜನು ಆ ಅಂಬಿಗರ ಹುಡಿಗೆಯ ಚೆಲ್ವಿಕೆಗೆ ಪೂರ್ಣವಾಗಿ ಮನಸೋತಿ
ದ್ದನು. ಅದರಿಂದ ಅವನು ಕೂಡಲೆ ದಾಶರಾಜನ ಮನೆಗೆ ಹೋಗಿ— ಎಲೈ ದಾ
ಶರಾಜನೇ, ನಾನು ಹೇಳುವದನ್ನು ಕೇಳು; ನನಗೆ ಒಬ್ಬನೇ ಮಗನಿರುವನು; ಹೆಂ
ಡತಿಯಿಲ್ಲ. ಮಕ್ಕಳ ಸಲುವಾಗಿ ನಿನ್ನ ಮಗಳನ್ನು ಮದುವೆಯಾಗಲಪೇಕ್ಷಿಸಿ
ರುವೆನು. ನಿನ್ನ ಮಗಳನ್ನು ನನಗೆ ಮದುವೆಮಾಡಿ ಕೊಡುವೆಯಾ? ಎಂದು
ಕೇಳಿದನು.

ಆಗ ದಾಶರಾಜನು ಶಂತನು ಮಹಾರಾಜನ ಮಾತುಗಳನ್ನು ಸಮಾಧಾನ
ದಿಂದ ಕೇಳಿಕೊಂಡು ನಮ್ರತನದಿಂದ ಮಾತನಾಡ ತೊಡಗಿದನು- “ಮಹಾರಾ
ಜರೇ, ತಾವು ಯಾರೆಂಬದನ್ನು ನಾನು ಬಲ್ಲೆನು; ಲೋಕಪ್ರಸಿದ್ಧವಾದ ಕುರುಕುಲ
ದಲ್ಲಿ ತಾವು ಜನಿಸಿದವರು; ಈ ವಿಶಾಲವಾದ ರಾಜ್ಯಕ್ಕೆಲ್ಲ ತಾವೇ ಒಡೆಯರು;
ತಮ್ಮಂತಹ ಸರ್ವಶಾಸ್ತ್ರ ಪಾರಂಗತರಾದ ಧಾರ್ಮಿಕರಾಜನು ಇನ್ನೊಬ್ಬನಿಲ್ಲ;
ಮಗಳನ್ನು ಸತ್ಪಾತ್ರದಲ್ಲಿ ದಾನಮಾಡಬೇಕೆಂದು ಯಾವ ತಂದೆಯು ಅಪೇಕ್ಷಿಸಿ
ರುವದಿಲ್ಲ? ವಿಶೇಷವಾಗಿ ತಮ್ಮಂಥ ವರವು ಸಿಕ್ಕುವದು ದುರ್ಲಭವು. ಆದರೆ ನನ್ನ
ದೊಂದು ಬೇಡಿಕೆಯುಂಟು. ಮಹಾರಾಜರೇ, ತಾವು ನನ್ನ ಮಗಳನ್ನು ಮದು
ವೆಯಾಗುವದಾದರೆ ನನ ಆ ಬೇಡಿಕೆಯನ್ನು ಪೂರ್ಣಮಾಡಬೇಕಾಗುವದು.”

ದಾಶರಾಜನ ಈ ನುಡಿಗಳನ್ನು ಕೇಳಿ ಶಂತನುವು ವಿಚಾರ ಮಾಡಿ— ದಾಶರಾಜನೇ, ನಿನ್ನ ಬೇಡಿಕೆಯೇನೆಂಬುದನ್ನು ತಿಳಿಯದೆ ಹೇಗೆ ಹೇಳಲಿ? ನಿನ್ನ ಬೇಡಿಕೆಯನ್ನು ಪೂರ್ಣಮಾಡುವದು ಶಕ್ಯವಿದ್ದರೆ ಪೂರ್ಣಮಾಡಬಹುದು; ಆದರೆ ಅದು ಅಶಕ್ಯವಿದ್ದರೆ ಹೇಗಾದೀತು ಎಂದನು.

ಆಗ ದಾಶರಾಜನು:— ಮಹಾರಾಜರೇ, ನನ್ನ ಬೇಡಿಕೆಯಿಷ್ಟೇ- ನನ್ನ ಮಗಳ ಹೊಟ್ಟೆಯಲ್ಲಿ ಹುಟ್ಟುವ ಮಗನೇ ಮುಂದೆ ರಾಜ್ಯಾಧಿಕಾರಿಯಾಗಬೇಕು; ಅವನಿಗೇ ತಾವು ಪಟ್ಟಗಟ್ಟಬೇಕು. ತಮ್ಮ ತರುವಾಯ ಮತ್ತಾರೂ ರಾಜ್ಯದಲ್ಲಿ ಪಾಲುಬೇಡುವವರು ಇರಬಾರದು; ಇದೇ ನನ್ನ ಬೇಡಿಕೆಯು. ನನ್ನ ಮಾತಿಗೆ ತಾವು ಒಪ್ಪಿದರೆ ನಾನು ಬಹಳ ಸಂತೋಷದಿಂದ ತಮಗೆ ಮಗಳನ್ನು ಮದುವೆಮಾಡಿಕೊಟ್ಟು ಕೃತಾರ್ಥನಾಗುವೆನು ಎಂದನು.

ದಾಶರಾಜನ ಈ ಬೇಡಿಕೆಯು ಶಂತನು ಮಹಾರಾಜನ ಮನಸ್ಸಿಗೆ ಬರಲಿಲ್ಲ. ದೇವವ್ರತನಂಥ ಸುಪುತ್ರನಿರುವಾಗ ಆತನಿಗೆ ಅರಸೊತ್ತಿಗೆ ದೊರೆಯದಂತೆ ಮಾಡುವದು ಎಂದಾದರೂ ಮಹಾರಾಜನ ಮನಸ್ಸಿಗೆ ಬಂದೀತೇ? ರಾಜ್ಯದಲ್ಲಿ ಮಂತ್ರಿಗಳು ಪ್ರಜೆಗಳು ಮೊದಲಾಗಿ ಎಲ್ಲರ ಆದರಕ್ಕೆ ಪಾತ್ರನಾಗಿ ವಿದ್ಯೆಯಲ್ಲಿಯೂ ಶಸ್ತ್ರಾಸ್ತ್ರಗಳಲ್ಲಿಯೂ ನಿಪುಣನೆನಿಸಿಕೊಂಡು ವಿನಯಸಂಪನ್ನನಾಗಿ ಯುವರಾಜಪಟ್ಟದಲ್ಲಿರುವ ತನ್ನ ಔರಸಪುತ್ರನಿಗೆ ಕ್ರಮಪ್ರಾಪ್ತವಾದ ಪಟ್ಟದ ಅಧಿಕಾರವು ದೊರೆಯದಂತೆ ಮಾಡುವದು ಎಷ್ಟು ಅನುಚಿತವು! ಇದೆಲ್ಲ ಆಲೋಚನೆಯು ಮನಸ್ಸಿನಲ್ಲಿ ಬಂದೊಡನೆ ಅರಸನು ಬಹಳ ವ್ಯಥೆಬಟ್ಟು ಬಳಿಕ ಮನಸ್ಸಿನ ನಿಷ್ಕರ್ಷವನ್ನು ಮಾಡಿಕೊಂಡು ಆತನು ದಾಶರಾಜನಿಗೆ 'ನಿನ್ನ ಬೇಡಿಕೆಯನ್ನು ಪೂರ್ಣಮಾಡುವದು ಶಕ್ಯವಿಲ್ಲ' ಎಂದು ಹೇಳಿ ಹಸ್ತಿನಾವತಿಗೆ ಹೊರಟುಬಂದನು.

—*o*—

(೫)

ಗಂಗಾದೇವಿಯು ಅದೃಶ್ಯಳಾಗಿ ಹೊರಟುಹೋದ ಬಳಿಕ ಶಂತನುಮಹಾರಾಜನು ಮತ್ತೆ ಮದುವೆಮಾಡಿಕೊಂಡಿರಲಿಲ್ಲ. ಆತನಿಗೆ ದೇವವ್ರತನೊಬ್ಬನಲ್ಲದೆ ಮತ್ತೆ ಮಕ್ಕಳಿರಲಿಲ್ಲ. ಆದದರಿಂದ ಒಮ್ಮೊಮ್ಮೆ ಆತನ ಮನಸ್ಸಿನಲ್ಲಿ—ಒಬ್ಬ ಮಗನು ಮಗನಲ್ಲವೆಂದು ಜನರು ತಿಳಿಯುತ್ತಾರೆ; ಯಾಕಂದರೆ, ಒಬ್ಬ ಮಗನ ನಂಬಿಗೆಯೇನು? ಈ ವಿಚಾರವು ಆತನ ಮನಸ್ಸಿನಲ್ಲಿ ಬರಲು ಎರಡನೆಯ ಮದುವೆ ಮಾಡಿಕೊಳ್ಳಬೇಕೆಂಬ ಆಲೋಚನೆಯನ್ನು ಅವನು ಮಾಡುವನು. ಇನ್ನು ದಾಶ

ರಾಜನ ಬೇಡಿಕೆಯನ್ನು ಪೂರಯಿಸಿ ಮದುವೆ ಮಾಡಿಕೊಳ್ಳುವದೂ ಶಕ್ಯವಿರಲಿಲ್ಲ. ಮತ್ತು ದಾಶರಾಜನ ಮಗಳನ್ನಲ್ಲದೆ ಇನ್ನೊಬ್ಬ ಸ್ತ್ರೀಯನ್ನು ಪ್ರೀತಿಸಿ ಮದುವೆಯಾಗುವದೂ ಇನ್ನು ಸಂಭವವಿರಲಿಲ್ಲ, ಆದದರಿಂದ ಆತನು ಹಾಗೆಯೇ ಚಿಂತೆಯಲ್ಲಿ ಕಾಲಕಳೆಯಲಾರಂಭಿಸಿದ್ದನು. ಇದರಿಂದ ಆತನು ಮೊದಲಿನಂತೆ ರಾಜಕಾರ್ಯಗಳಲ್ಲಿ ಮನಸ್ಸಿಡದವನಾದನು. ಆತನ ಸೊಗಸು ಹೊರಟುಹೋಯಿತು. ಕ್ರಮದಿಂದ ಆತನ ಶರೀರವು ಸೊರಗಹತ್ತಿತು. ಮೋರೆಯು ಬಾಡಿತು. ಕಣ್ಣುಗಳು ಹೊಳಪುಗುಂದಿದವು.

ಪಿತೃಭಕ್ತನಾದ ದೇವವ್ರತನು ತಂದೆಯ ಈ ಬಳಲಿಕೆಯನ್ನು ಕಂಡು ಬಹಳ ವ್ಯಥೆಗೊಳಗಾದನು. ಒಮ್ಮೆ ಅವನು ತಂದೆಯ ಬಳಿಗೆ ಬಂದು ಅಪ್ಪಾ, ರಾಜ್ಯದಲ್ಲಿ ಎಲ್ಲಿ ನೋಡಿದರೂ ಸುಖಶಾಂತಿಗಳು ನೆಲೆಗೊಂಡಿವೆ. ಎಲ್ಲಿಯೂ ಶತ್ರುಗಳ ಸುಳಿದಾಟವಿಲ್ಲ. ಹೀಗಿರಲು ತಾವು ಯಾವಾಗಲೂ ಚಿಂತೆಯಲ್ಲಿರುವ ಕಾರಣವೇನು ಎಂದು ಕೇಳಿದನು.

ಶಂತನು–ಮಗನೇ, ನೀನು ಕೇಳಿದಂತೆ ನಾನು ಚಿಂತೆಯಲ್ಲಿರುವದು ನಿಜವು. ಯಾಕಂದರೆ, ನನಗೆ ನೀನೊಬ್ಬನೇ ಮಗನು. ಲೋಕದಲ್ಲಿ ಎಲ್ಲವೂ ಅಸ್ಥಿರವಾದುದು. ನಿನಗೇನಾದರೂ ಒಂದುವೇಳೆ ನನ್ನ ಕಣ್ಣೆದುರಿಗೆ ಅಮಂಗಲವೊದಗಿದರೆ ನಮ್ಮ ಪವಿತ್ರವಾದ ಈ ಕುರುವಂಶದ ಗತಿಯೇನು ? ಮುಂದೆ ವೃದ್ಧಾಪ್ಯದಲ್ಲಿ ನಾನೇನು ಮಾಡಲಿ? ಶಾಸ್ತ್ರದಲ್ಲಿ ಒಬ್ಬ ಮಗನು ಮಗನಲ್ಲವೆಂದು ಹೇಳಿದೆ. ನಿನ್ನ ಸಾಹಸ ಪರಾಕ್ರಮಗಳನ್ನು ನೋಡಲು ಯುದ್ಧದಲ್ಲಿ ನಿನಗೆ ಎಲ್ಲಿಯಾದರೂ ಅಪಾಯವಾದೀತೆಂದು ನನ್ನ ಮನಸ್ಸು ಅಳುಕಹತ್ತಿದೆ. ಇದರಿಂದ ದಿನದಿನಕ್ಕೆ ನನ್ನ ಮನಸ್ಸಿನ ಶಾಂತಸ್ಥಿತಿಯು ಕಡಿಮೆಯಾಗುತ್ತಿದೆ ಎಂದು ಹೇಳಿದನು.

ದೇವವ್ರತನು ತಂದೆಯ ಈ ವಿಚಾರವನ್ನು ಕೇಳಿ ಕೆಲವು ಹೊತ್ತು ಸ್ತಬ್ಧನಾಗಿ ನಿಂತುಕೊಂಡನು. ತಂದೆಗೆ ಏನು ಸಮಾಧಾನ ಹೇಳಬೇಕೆಂಬದು ಸ್ವಲ್ಪವೂ ಹೊಳೆಯಲಿಲ್ಲ. ಕೊನೆಗೆ ಹಾಗೇ ಮರಳಿ ಬಂದನು. ಈ ವಿಷಯದಲ್ಲಿ ಏನು ಉಪಾಯ ಮಾಡಬೇಕೆಂಬದನ್ನು ವೃದ್ಧಮಂತ್ರಿಗಳನ್ನಾದರೂ ಕೇಳಿ ತಿಳಿದುಕೊಳ್ಳಬೇಕೆಂದು ತಂದೆಯ ಅತ್ಯಂತವಿಶ್ವಾಸಪಾತ್ರವಾದ ಒಬ್ಬ ಮಂತ್ರಿಯ ಬಳಿಗೆ ಬಂದು ತಂದೆಯಾಡಿದ ಮಾತುಗಳನ್ನೆಲ್ಲ ಹೇಳಿ, ತಾನು ಏನು ಮಾಡಿದರೆ ತಂದೆಯ ಚಿಂತೆಯು ಹೋದೀತೆಂದು ಕೇಳಿದನು; ಆಗ ಆ ಮಂತ್ರಿಯು–ಯುವರಾಜನೇ, ಮಹಾರಾಜರಿಗೆ ನೀನೊಬ್ಬನೇ ಮಗನು. ತಮಗೆ ಇನ್ನೂ ಒಬ್ಬಿಬ್ಬರು ಮಕ್ಕಳಿರಬೇಕೆಂದು ಅವರ ಅಪೇಕ್ಷೆಯುಂಟು. ಇದರಿಂದ ಎರಡನೆಯ ಮದುವೆ

ಯನ್ನು ಮಾಡಿಕೊಳ್ಳಬೇಕೆಂಬ ವಿಚಾರವನ್ನು ಕೂಡ ಅವರು ಮಾಡಿದ್ದರು, ಎಂದು ಹೇಳಿ ಬಳಿಕ ದಾಶರಾಜನ ಬಳಿಗೆ ಹೋದಾಗ ನಡೆದ ವೃತ್ತಾಂತವನ್ನೆಲ್ಲ ಹೇಳಿದನು. ಮತ್ತು ಯುವರಾಜನೇ, ನಿನ್ನ ಮೇಲೆ ದೃಷ್ಟಿಯಿಟ್ಟು ನಿನಗೆ ಅಹಿತವಾಡಿದಂತಾಗುವದೆಂದು ತಿಳಿದೇ ಮಹಾರಾಜರು ದಾಶರಾಜನ ಬೇಡಿಕೆಯನ್ನೊಪ್ಪದೆ ಆ ಮದುವೆಯ ವಿಚಾರವನ್ನು ಈಗ ಬಿಟ್ಟಂತೆ ತೋರುವದು ಎಂದು ಹೇಳಿದನು.

ನಂಬಿಗೆಯ ಮಂತ್ರಿಯು ಹೇಳಿದ ಈ ಮಾತುಗಳನ್ನು ಕೇಳಿ ದೇವವ್ರತನು ತಂದೆಯ ಚಿಂತೆಯ ಕಾರಣವನ್ನು ಕಂಡುಹಿಡಿದನು. ಪಿತೃಭಕ್ತನಾದ ಆತನು ಏನಾದರೂ ಮಾಡಿ ತಂದೆಯ ಚಿಂತೆಯನ್ನು ಹೋಗಲಾಡಿಸಿಯೇ ತೀರಬೇಕೆಂದು ನಿಶ್ಚಯಿಸಿಕೊಂಡನು. ಮಗನಿಗೆ ತಂದೆಯೇ ದೇವರು. ತಂದೆಯನ್ನು ಸಂತೋಷಗೊಳಿಸಿದರೆ ಮಗನ ಇಷ್ಟಾರ್ಥಗಳೆಲ್ಲವೂ ನೆರವೇರುವವು. ಈ ವಿಚಾರದಿಂದ ದೇವವ್ರತನು ತಂದೆಯ ಚಿಂತೆಯನ್ನು ಕಳೆಯುವ ವಿಚಾರದಲ್ಲಿ ಮಗ್ನನಾದನು. ಬಳಿಕ ಒಂದು ನಿರ್ಣಯವನ್ನು ಮಾಡಿಕೊಂಡು ಕೆಲವು ಜನ ಮಂತ್ರಿಗಳನ್ನು ಸಂಗಡ ಕರೆದುಕೊಂಡು ದಾಶರಾಜನ ಬಳಿಗೆ ಹೋಗಿ ತನ್ನ ತಂದೆಯ ಸಲುವಾಗಿ ಆತನ ಮಗಳನ್ನು ಬೇಡಿದನು.

ದಾಶರಾಜನು ದೇವವ್ರತನಿಗೆ ಯೋಗ್ಯವಾದ ಮನ್ನಣೆಯನ್ನು ಮಾಡಿ ತಲೆವಾಗಿ ಈ ಪ್ರಕಾರ ಹೇಳಿದನು:—“ಯುವರಾಜರೇ, ತಾವು ಕುರುಕುಲಕ್ಕೆ ಭೂಷಣವೆನಿಸಿರುವಿರಿ. ಎಲ್ಲ ವಿಷಯಗಳಲ್ಲಿ ತಮ್ಮಂತಹ ಯೋಗ್ಯ ಪುತ್ರರು ದೊರೆಯುವದು ಪೂರ್ವಪುಣ್ಯವೇ ಸರಿ. ತಾವು ಈಗ ನನ್ನ ಮಗಳನ್ನು ಮಹಾರಾಜರಿಗಾಗಿ ಕೇಳಬಂದಿರುವಿರಿ. ಮಗಳಿಗೆ ಇಂತಹ ಮನೆಯು ದೊರೆಯುವಾಗ ಯಾವ ತಂದೆಯು ಹಿಂದು ಮುಂದೆ ನೋಡಿಯಾನು? ನಾನು ಮಗಳನ್ನು ಮಹಾರಾಜರಿಗಾಗಿ ಕೊಡುವೆನು; ಆದರೆ ಮಗಳ ಮುಂದಿನ ಕಲ್ಯಾಣದ ಕಡೆಗೆ ದೃಷ್ಟಿಯನ್ನಿಡುವದು ತಂದೆಯ ಕರ್ತವ್ಯವೆಂಬದನ್ನು ನಿಮ್ಮಂತಹ ವಿವೇಕಿಗಳಿಗೆ ಹೇಳಬೇಕಾದುದಿಲ್ಲ. ಮಹಾರಾಜರಿಗೆ ನನ್ನ ಮಗಳ ಹೊಟ್ಟೆಯಲ್ಲಿ ಹುಟ್ಟುವ ಮಗನೇ ಮುಂದೆ ರಾಜ್ಯಾಧಿಕಾರಿಯಾಗಬೇಕೆಂದು ನನ್ನ ಬಯಕೆಯುಂಟು. ಹೀಗಿರುವಾಗ ಈ ಮದುವೆಯಾದರೆ ಮೊದಲು ತಮ್ಮಂಥವರೊಡನೆಯೇ ವಿರೋಧವುಂಟಾಗುವ ಸಂದರ್ಭವು ಬರುವದು. ತಮ್ಮಂಥ ವೀರಶ್ರೇಷ್ಠರೊಡನೆ ವಿರೋಧಮಾಡಿ ಯಾವಾತನು ಬಾಳಿಯಾನು? ಇದಲ್ಲದೆ ಅಂತಹ ವಿಷಮ ಸಮಯವನ್ನಾದರೂ ಏಕೆ ತಂದುಕೊಳ್ಳಬೇಕು?

ಅಂಬಿಗರೊಡೆಯನ ಈ ಮಾತುಗಳನ್ನು ಕೇಳಿ ಪಿತೃಭಕ್ತನಾದ ದೇವವ್ರತನು ಸ್ವಲ್ಪವೂ ಅಂಜಲಿಲ್ಲ. ಆತನ ಪಿತೃಭಕ್ತಿಯು ಸರ್ವಸಾಮಾನ್ಯವೇ? ಕ್ಷುದ್ರವಾದ

ಸ್ವಾರ್ಥಬುದ್ಧಿಯು ಅದಕ್ಕೆ ತಡೆಯಾಗುವಂತೆ ಇರಲಿಲ್ಲ. ಆ ಕಾಲಕ್ಕೆ ಆತನ ಮನಸ್ಸಿನೊಳಗಿಂದ ಸ್ವಾರ್ಥಬುದ್ಧಿಯೂ ವಿಷಯ ಸುಖಾಪೇಕ್ಷೆಯೂ ಏಕ ಕಾಲಕ್ಕೆ ಸಂಪೂರ್ಣವಾಗಿ ಹೊರಟುಹೋದವು! ಭಕ್ತಿವಿಶ್ವಾಸಗಳು ಆತನ ಹೃದಯದಲ್ಲಿ ಉಕ್ಕೇರಿ ಬಂದವು. ದಾಶರಾಜನ ಕಟುವಚನಗಳಿಂದ ಅವನ ಮನಸ್ಸಿಗೆ ಏನೂ ಅಸಮಾಧಾನವಾಗಲಿಲ್ಲ. ದೇವವ್ರತನು ಸ್ವಲ್ಪವೂ ಹಿಂದು ಮುಂದೆ ನೋಡದೆ ತನ್ನ ಸ್ವಾರ್ಥತ್ಯಾಗಕ್ಕೂ ಪಿತೃಭಕ್ತಿಗೂ ಉಚಿತವೆನಿಸುವಂತೆ ದಾಶರಾಜನನ್ನು ಕುರಿತು— ದಾಶರಾಜನೇ, ನಿನ್ನ ಅಭಿಪ್ರಾಯವು ತಿಳಿಯಿತು. ಈಗ ನಾನು ಪ್ರತಿಜ್ಞಾ ಪೂರ್ವಕವಾಗಿ ಹೇಳುವದನ್ನು ಕೇಳು— ನನ್ನ ಪರಮ ಪೂಜ್ಯನಾದ ತಂದೆಗೆ ನಿನ್ನ ಮಗಳ ಹೊಟ್ಟೆಯಲ್ಲಿ ಹುಟ್ಟುವ ಮಗನೇ ಸಂಪೂರ್ಣವಾದ ಹಸ್ತಿನಾವತಿಯ ರಾಜ್ಯಕ್ಕೆ ಉತ್ತರಾಧಿಕಾರಿಯಾಗಲಿ; ಆತನೇ ಕುರುರಾಜ್ಯದ ಸಿಂಹಾಸನಾಧಿಪತಿಯೆಂದು ನಾನು ಒಪ್ಪಿಕೊಳ್ಳುತ್ತೇನೆ. ಆತನ ಒಡೆತನಕ್ಕೂ ಆತನ ವಿಶಾಲವಾದ ಸಾಮ್ರಾಜ್ಯದ ಒಂದು ಸಣ್ಣ ಭಾಗಕ್ಕೂ ಕೂಡ. ನಾನು ನನ್ನ ಸ್ವಾಮಿತ್ವವನ್ನು ಎಂದೂ ತೋರಿಸುವದಿಲ್ಲ. ಎಂದು ಹೇಳಿದನು. ಆಗ ದಾಶರಾಜನು ಮತ್ತೆ ಮಾತಾಡುತ್ತಾನೆ.—"ಯುವರಾಜರೇ, ತಮ್ಮ ಪ್ರತಿಜ್ಞೆಯು ಶ್ಲಾಘ್ಯವಾದುದೂ ತಮ್ಮ ಪಿತೃಭಕ್ತಿಗೆ ಒಪ್ಪುವಂಥದೂ ಆಗಿರುವದು! ನಿಜವೇ. ಆದರೆ ಈ ವಿಷಯದಲ್ಲಿ ನಾನು ಇನ್ನೂ ಸ್ವಲ್ಪ ಹೇಳತಕ್ಕದ್ದುಂಟು. ತಾವೂ ಆ ವಿಷಯವನ್ನು ವಿಚಾರಮಾಡಿ ನೋಡಿರಿ. ಮಗಳ ಕಲ್ಯಾಣದ ವಿಚಾರವನ್ನು ತಂದೆಯು ನೋಡಬೇಕಾದದ್ದು ಅವಶ್ಯವು. ನಾನು ಮಾತಾಡುವದು ಬಿರುಸಾಗಿದ್ದರೂ ಮೊದಲೇ ಮಾತಾಡಿಬಿಡುವದು ಒಳ್ಳೆಯದೆಂದು ತಿಳಿದು ಆಡುತ್ತೇನೆ. ತಾವು ನನ್ನ ಮಗಳು ಸತ್ಯವತಿಯ ಸಲುವಾಗಿ ಎಲ್ಲರೆದುರಿಗೆ ಪ್ರತಿಜ್ಞೆಮಾಡಿದುದು ತಮ್ಮಂಥ ಪಿತೃಭಕ್ತರಿಗೆ ಯೋಗ್ಯವಾದದ್ದೇ ಸರಿ. ತಾವು ಆಮೇರೆಗೆ ತಪ್ಪದೆ ನಡೆಯುವವರೆಂಬ ವಿಷಯದಲ್ಲಿ ಸಂಶಯವಿಲ್ಲ. ಆದರೆ ತಮ್ಮ ಮಕ್ಕಳು ತಮ್ಮಂತೆ ನಡೆಯುವರೆಂಬದನ್ನು ಹೇಗೆ ನಂಬಲಾದೀತು? ಅವರು ತಮಗೆ ಸಲ್ಲಬಹುದಾದ ಅರಸೊತ್ತಿಗೆಯನ್ನು ಯಾಕೆ ಬಿಟ್ಟಾರು?"

ದಾಶರಾಜನ ಈ ಮಾತುಗಳನ್ನು ಕೇಳಿ ದೇವವ್ರತನು ಸ್ವಲ್ಪವೂ ಆಲೋಚಿಸದೆ ಗಂಭೀರಧ್ವನಿಯಿಂದ—ದಾಶರಾಜನೇ, ಈ ಮೊದಲೇ ನಾನು ರಾಜ್ಯಭೋಗವನ್ನು ತೊರೆದ ಪ್ರತಿಜ್ಞೆಯನ್ನು ಮಾಡಿರುವೆನು. ನೀನು ಇನ್ನೂ ಸಂಶಯಗೊಂಡದ್ದರಿಂದ ಮತ್ತೆ ಪ್ರತಿಜ್ಞೆಮಾಡಿ ಹೇಳುತ್ತೇನೆ, ಕೇಳು. ಇಲ್ಲಿ ನೆರೆದಿರುವ ಮಹಾಜನಗಳೇ, ಎಲ್ಲರೂ ಕೇಳಿರಿ—"ಈ ಜನ್ಮದಲ್ಲಿ ನಾನು ಮದುವೆಯನ್ನೇ ಮಾಡಿಕೊಳ್ಳುವದಿಲ್ಲ; ಇಂದಿನಿಂದ ಆಮರಣ ಬ್ರಹ್ಮಚರ್ಯವನ್ನೇ ಪಾಲಿಸುವೆನು" ಎಂದು ಪ್ರತಿಜ್ಞೆಮಾಡಿದನು,

ದಾಶರಾಜನೇ, ನಾನು ನನ್ನ ತಂದೆಯ ಸಲುವಾಗಿ ಈ ಮಹಾಪ್ರತಿಜ್ಞೆಯನ್ನು ಮಾಡಿ ಕಠೋರವಾದ ಬ್ರಹ್ಮಚರ್ಯವ್ರತವನ್ನು ಕಡೆತನಕ ಪಾಲಿಸುವೆನೆಂಬ ಪ್ರತಿಜ್ಞೆಯಿಂದ ಬದ್ಧನಾಗಿರುವೆನು; ಇನ್ನೇನಾದರೂ ನಿನ್ನ ಸಂಶಯವಿದ್ದರೆ ಹೇಳು ಎಂದನು.

ದಾಶರಾಜನು ದೇವವ್ರತನ ಈ ಮಹಾಪ್ರತಿಜ್ಞೆಯನ್ನು ಕೇಳಿ ಬೆರಗಾದನು. ಅಲ್ಲಿ ನೆರೆದ ಎಲ್ಲಾ ಜನರ ಮೈಮೇಲೆ ರೋಮಾಂಚಗಳೆದ್ದವು. ಸುರರು ದೇವವ್ರತನ ತಲೆಯಮೇಲೆ ಪೂಮಳೆಗರೆದರು. ಈ ಮಹಾಪ್ರತಿಜ್ಞೆಯ ಸುದ್ದಿಯು ಶಂತನುಮಹಾರಾಜನಿಗೆ ತಿಳಿಯಲು ಆತನು ಮಗನ ಈ ಅಲೌಕಿಕ ಸ್ವಾರ್ಥತ್ಯಾಗಕ್ಕೂ ಅಸಾಧಾರಣವಾದ ದಾರ್ಢ್ಯಕ್ಕೂ ಆಶ್ಚರ್ಯಬಟ್ಟನು. ಕೇಳಿದವರೆಲ್ಲರೂ ಚಕಿತರಾದರು. ಮಂತ್ರಿಗಳು ಯುವರಾಜನನ್ನು ಹಲವು ಬಗೆಯಿಂದ ಹೊಗಳಿದರು. ಈ ಭೀಷ್ಮ(ಭಯಂಕರ)ವಾದ ಪ್ರತಿಜ್ಞೆಯನ್ನು ಮಾಡಿದದರಿಂದ ಅಂದಿನಿಂದ ಈ ಅದ್ವಿತೀಯ ಪುರುಷನಿಗೆ "ಭೀಷ್ಮ'ನೆಂಬ ಹೆಸರುಂಟಾಯಿತು.

ಶಂತನುಮಹಾರಾಜನು ಮಗನ ಲೋಕತ್ತರ ಪಿತೃಭಕ್ತಿಗೆ ಮೆಚ್ಚಿ ಮಗನೇ, ನೀನು ಇಚ್ಛಾಮರಣಿಯಾಗು ಎಂದು ವರವ ಕೊಟ್ಟು ಆಶೀರ್ವಾದ ಮಾಡಿದನು.

---

## (೬)

ಭೀಷ್ಮನ ಕೊನೆಯ ಪ್ರತಿಜ್ಞೆಯನ್ನು ಕೇಳಿದ ಬಳಿಕ ದಾಶರಾಜನು ಏನೂ ಅನುಮಾನ ಬಡದೆ ಶಂತನುಮಹಾರಾಜನಿಗೆ ತನ್ನ ಮಗಳು ಸತ್ಯವತಿಯನ್ನು ಧಾರೆಯೆರೆದು ಕೊಟ್ಟನು. ಈ ದಿವ್ಯಸುಂದರಿಯನ್ನು ಮದುವೆಯಾಗಿ ಶಂತನುಮಹಾರಾಜನು ಬಹಳ ಆನಂದದಿಂದ ಕಾಲಕಳೆಯಲಾರಂಭಿಸಿದನು.

ದೇವವ್ರತನು ಮಾತಾಪಿತೃಗಳ ಸೇವೆಯನ್ನು ಭೇದವಿಲ್ಲದೆ ಭಕ್ತಿಯಿಂದ ಮಾಡತೊಡಗಿದನು. ಸತ್ಯವತಿಯು ಮಗನ ಈ ನಡತೆಯನ್ನು ನೋಡಿ ಬಹಳ ಸಂತುಷ್ಟಳಾದಳು. ಈ ಮೇರೆಗೆ ಶಂತನುಮಹಾರಾಜನ ಅರಮನೆಯು ಮತ್ತೆ ಆನಂದದ ಆಗರವೆನಿಸಿತು.

ಕೆಲವು ದಿವಸಗಳ ತರುವಾಯ ಸತ್ಯವತೀರಾಣಿಯು ಒಂದು ಗಂಡುಮಗನನ್ನು ಹಡೆದಳು. ವೃದ್ಧನಾದ ಶಂತನುರಾಜನಿಗೆ ಬಹಳ ಸಂತೋಷವಾಯಿತು.

ರಾಜ್ಯದಲ್ಲೆಲ್ಲ ಪುತ್ರೋತ್ಸವವು ಬಹಳ ವಿಜೃಂಭಣೆಯಿಂದ ನೆರವೇರುವಂತೆ ಯುವ ರಾಜನಾದ ದೇವವ್ರತನು ತಕ್ಕ ಏರ್ಪಾಡುಮಾಡಿದನು ಪ್ರಜೆಗಳೂ ತಮ್ಮ ವೃದ್ಧರಾಜನಿಗೆ ಗಂಡುಮಗನು ಹುಟ್ಟಿದ ಸುದ್ದಿಯನ್ನು ಕೇಳಿ ಉತ್ಸವವನ್ನು ಮಾಡಿದರು. ಸುವಾಸಿನಿಯರು ಮಂಗಳದ ಹಾಡುಗಳನ್ನು ಹಾಡಿದರು, ವಂದಿಮಾಗಧರು ಮಂಗಲಪಾಠಗಳನ್ನು ಹೇಳಿದರು. ಬ್ರಾಹ್ಮಣರು ಶಾಂತಿಸೂಕ್ತಗಳನ್ನು ಪಠಿಸಿದರು. ಈ ಮಗುವಿಗೆ ಮಹಾರಾಜನು ಚಿತ್ರಾಂಗದನೆಂದು ನಾಮಕರಣ ಮಾಡಿದನು

ಈ ಚಿತ್ರಾಂಗದನು ದೊಡ್ಡವನಾದ ಬಳಿಕ ಭೀಷ್ಮನು ತನ್ನ ತಮ್ಮನ ವಿದ್ಯಾಭ್ಯಾಸದ ತಕ್ಕ ಅನುಕೂಲತೆಗಳನ್ನು ತಾನೇ ಮಾಡಿದನು. ಸ್ವಲ್ಪ ದಿವಸಗಳಲ್ಲಿ ಚಿತ್ರಾಂಗದನು ಎಲ್ಲ ವಿದ್ಯೆಗಳಲ್ಲಿಯೂ ನಿಪುಣನೆನಿಸಿಕೊಂಡನು.

ಚಿತ್ರಾಂಗದನು ಹುಟ್ಟಿದ ಬಳಿಕ ಕೆಲವು ವರ್ಷಗಳಲ್ಲಿ ಸತ್ಯವತಿಯು ಮತ್ತೊಬ್ಬ ಮಗನನ್ನು ಪಡೆದಳು. ಈ ಮಗುವಿಗೆ ವಿಚಿತ್ರವಿರ್ಯನೆಂದು ಹೆಸರಿಟ್ಟರು. ಎಲ್ಲರಿಗೂ ಮತ್ತೆ ಆನಂದವೆನಿಸಿತು. ಈ ಮೇರೆಗೆ ಶಂತನುಮಹಾರಾಜನ ಮುಪ್ಪಿನಕಾಲದ ಸಂಸಾರವು ಆನಂದಮಯವಾಯಿತು.

ಸುಖದ ದಿವಸಗಳು ಬಲುಬೇಗ ಹೋಗುವವು. ವಿಚಿತ್ರವೀರ್ಯನು ಚಿಕ್ಕವನಿರುವಾಗಲೇ ಶಂತನುಮಹಾರಾಜನು ಪರಲೋಕಕ್ಕೆ ತೆರಳಿದನು. ತಂದೆಯ ಮರಣದಿಂದ ಭೀಷ್ಮನು ಅಪಾರವಾದ ದುಃಖಸಾಗರದಲ್ಲಿ ಮುಳುಗಿದನು. ಈವರೆಗೆ ಆತನು ಪಿತೃಸೇವೆಯೊಂದೇ ತನ್ನ ಜೀವಕ್ಕೆ ಆಸರವೆಂದು ಭಾವಿಸಿಕೊಂಡಿದ್ದನು. ಈಗ ಆ ಆಸರವೇ ತಪ್ಪಿಹೋಯಿತು. ಭೀಷ್ಮನು ಕಾಲಕಳೆಯುವ ಬಗೆ ಯಾವದು?

ದುಃಖವೂ ಮನುಷ್ಯನಿಗೆ ಸ್ಥಿರವಲ್ಲ. ಸುಖವಳಿದು ದುಃಖವೊದಗುವಂತೆ ದುಃಖವಳಿದು ಸುಖವೂ ಒದಗುವದು. ದುಃಖವೇ ಸ್ಥಿರವಾಗಿ ಉಳಿದರೆ ಮನುಷ್ಯನು ಬದುಕಲಾರನು. ಭೀಷ್ಮನು ತನ್ನ ಶೋಕಭಾರವನ್ನು ಕಡಿಮೆಮಾಡಿಕೊಂಡು ತಂದೆಯ ಪಾರಲೌಕಿಕ ಕ್ರಿಯೆಗಳನ್ನು ಯೋಗ್ಯವಾಗಿ ಮಾಡಿದನು.

ಉತ್ತರಕ್ರಿಯೆಗಳೆಲ್ಲ ಮುಗಿದ ತರುವಾಯ ಭೀಷ್ಮನು ಚಿತ್ರಾಂಗದನಿಗೆ ಪಟ್ಟಗಟ್ಟುವದಕ್ಕೆ ತಾಯಿ ಸತ್ಯವತಿಯ ಒಪ್ಪಿಗೆಯನ್ನು ಕೇಳಿದನು. ಆಕೆಯ ಅಪ್ಪಣೆಯು ದೊರೆತ ಕೂಡಲೆ ಪಟ್ಟಾಭಿಷೇಕದ ಸರ್ವಸಿದ್ಧತೆಯನ್ನು ಮಾಡಿದನು. ಶುಭದಿವಸದಲ್ಲಿ ಮಂತ್ರಿಗಳು ಸಾಮಂತರು ಪ್ರಜಾಪ್ರಮುಖರು ಇವರನ್ನೆಲ್ಲ ಕರೆಯಿಸಿ

ಹಸ್ತಿನಾವತಿಯಲ್ಲಿ ಚಂದ್ರವಂಶದ ಸಿಂಹಾಸನದ ಮೇಲೆ ಶಂತನುಮಹಾರಾಜನ ಔರಸ ಪುತ್ರನಾದ ಚಿತ್ರಾಂಗದನನ್ನು ಮಹಾವೈಭವದಿಂದ ಕುಳ್ಳಿರಿಸಿ ಭೀಷ್ಮನು ತನ್ನ ಪ್ರತಿಜ್ಞೆಯನ್ನು ಪಾಲಿಸಿದನು. ಎಲ್ಲರೂ ಆನಂದಬಟ್ಟರು.

ಚಿತ್ರಾಂಗದನು ಬಹಳ ದಿವಸ ರಾಜ್ಯವಾಳಲಿಲ್ಲ. ಪಟ್ಟಾಭಿಷೇಕವಾದ ಸ್ವಲ್ಪ ದಿವಸಗಳಲ್ಲಿಯೇ ಸುತ್ತಲಿನ ಮಾಂಡಲಿಕರೆಲ್ಲ ಈತನಿಗೆ ಅಂಕಿತರಾಗಿ ನಡೆದರೂ ಚಿತ್ರರಥನೆಂಬ ಒಬ್ಬ ಪ್ರಬಲನಾದ ಗಂಧರ್ವರಾಜನು ಈತನಿಗೆ ವಿರೋಧವಾಗಿ ನಿಂತನು. ಚಿತ್ರಾಂಗದ ಮಹಾರಾಜನಿಗೂ ಚಿತ್ರರಥಗಂಧರ್ವನಿಗೂ ಕುರುಕ್ಷೇತ್ರದಲ್ಲಿ ಮೂರು ವರ್ಷಗಳವರೆಗೆ ಯುದ್ಧವು ನಡೆಯಿತು. ಆ ಯುದ್ಧದಲ್ಲಿ ಮಾಯಾವಿಯಾದ ಗಂಧರ್ವರಾಜನ ಮಾಯಾಜಾಲದಲ್ಲಿ ಸಿಕ್ಕು ಚಿತ್ರಾಂಗದನು ಮರಣ ಹೊಂದಿದನು.

ತಮ್ಮನ ಮರಣದಿಂದ ಭೀಷ್ಮನಿಗೆ ಅತಿಶಯ ದುಃಖವಾಯಿತು. ಬಳಿಕ ಆತನು ಸತ್ಯವತಿಯ ಒಪ್ಪಿಗೆಯಿಂದ ಚಿಕ್ಕವನಾದ ವಿಚಿತ್ರವೀರ್ಯನನ್ನು ಪಟ್ಟದ ಮೇಲೆ ಕುಳ್ಳಿರಿಸಿದನು. ವಿಚಿತ್ರವೀರ್ಯನು ಭೀಷ್ಮನ ಸಲಹೆಯಂತೆ ರಾಜ್ಯಭಾರವನ್ನು ನಾಗಿಸಿದನು. ಭೀಷ್ಮನು ಈ ತಮ್ಮನಿಗೆ ರಾಜ್ಯಭಾರದಲ್ಲಿ ತಕ್ಕಸಹಾಯವನ್ನೂ ಉಪದೇಶವನ್ನೂ ಮಾಡುತ್ತಿದ್ದನು. ಸ್ವಲ್ಪದಿವಸಗಳಲ್ಲಿ ವಿಚಿತ್ರವೀರ್ಯನು ಪ್ರಬಲನಾದ ಅರಸನೆಂದು ಹೆಸರಾದನು. ಪ್ರಜಾನುರಾಗವನ್ನೂ ಸಂಪಾದಿಸಿದನು. ಕ್ರಮದಿಂದ ವಿಚಿತ್ರವೀರ್ಯನು ಪ್ರಾಯಕ್ಕೆ ಬಂದನು. ಭೀಷ್ಮನು ತಮ್ಮನ ಮದುವೆಯ ಆಲೋಚನೆಗೊಳಗಾದನು.

---

## (೭)

ಕಾಶಿಯ ಮಹಾರಾಜನು ಕುರುವಂಶದ ಸಂಗಡ ಶರೀರಸಂಬಂಧವಾಗುವದಕ್ಕೆ ತಕ್ಕ ಮನೆತನದವನಾಗಿದ್ದನು. ಅವನಿಗೆ ಮೂವರು ಹೆಣ್ಣುಮಕ್ಕಳಿದ್ದರು. ಅವರು ಅತ್ಯಂತ ರೂಪಲಾವಣ್ಯಗಳುಳ್ಳವರೆಂದು ಹೆಸರಾಗಿದ್ದರು. ಈ ಕಾಲದಲ್ಲಿ ಕಾಶಿಯ ಮಹಾರಾಜನು ತನ್ನ ಹೆಣ್ಣುಮಕ್ಕಳ ಸ್ವಯಂವರವನ್ನು ಮಾಡುವವನಿದ್ದನು. ಈ ವರ್ತಮಾನವು ಹಸ್ತಿನಾವತಿಗೆ ಬಂದಿತು. ಭೀಷ್ಮನು ಆ ಕನ್ನಿಕೆಯರನ್ನು ತಂದು ವಿಚಿತ್ರವೀರ್ಯನಿಗೆ ಮದುವೆಮಾಡಬೇಕೆಂದು ಸಂಕಲ್ಪ ಮಾಡಿ ಸತ್ಯವತಿಯ ಒಪ್ಪಿಗೆಯನ್ನು ಕೇಳಿದನು. ಒಪ್ಪಿಗೆಯು ದೊರೆತಕೂಡಲೆ ಸೈನ್ಯಸಹಿತ ಕಾಶಿಗೆ ಪ್ರಯಾಣಮಾಡಿದನು.

ಮೊದಲೇ ಗೊತ್ತಾದವೇರಿಗೆ ಸ್ವಯಂವರದ ದಿವಸ ಕಾಶೀಪಟ್ಟಣದಲ್ಲಿ ರಾಜಕುಮಾರರ ಸಭೆಯು ನೆರೆಯಿತು. ಅರಸುಮಕ್ಕಳು ಉಜ್ವಲವೇಷಭೂಷಣಗಳಿಂದ ಅಲಂಕೃತರಾಗಿ ತಂತಮ್ಮ ಆಸನಗಳಲ್ಲಿ ವಿರಾಜಮಾನರಾಗಿದ್ದರು. ಸ್ವಯಂವರಮಂಟಪವು ಝಗಝಗ ಹೊಳೆಯುತ್ತಿತ್ತು. ಮಂಗಳವಾದ್ಯಗಳು ಬಾರಿಸತೊಡಗಿದವು. ಅಗರುಧೂಪದ ಸುವಾಸನೆಯು ಮಂಟಪವನ್ನೆಲ್ಲ ಪಸರಿಸಿತು. ರಾಜಕುಮಾರಿಯರು ರತ್ನಖಚಿತವಾದ ಅಲಂಕಾರಗಳನ್ನು ಹಾಕಿಕೊಂಡು ಜರತಾರಿಯ ದುಕೂಲಗಳನ್ನುಟ್ಟುಕೊಂಡು ದಾಸಿಯರು ಚಾಮರಗಳನ್ನು ಬೀಸುತ್ತಿರಲು ಸಖಿಯರನ್ನೊಡಗೊಂಡು ಶಿಬಿಕಾರೋಹಣಮಾಡಿ ಸ್ವಯಂವರ ಮಂಟಪಕ್ಕೆ ಬಂದರು. ಬಂದಿಗಳು ನೆರೆದ ಅರಸುಮಕ್ಕಳಲ್ಲಿ ಒಬ್ಬೊಬ್ಬರ ಕುಲಶೀಲ ವೀರ್ಯಗಳನ್ನು ವರ್ಣಿಸತೊಡಗಿದರು. ಎಲ್ಲಕಡೆಗೆ ಗುಜುಗುಜು ಧ್ವನಿಯಾಗುತ್ತಿತ್ತು.

ಈ ಸಮಯದಲ್ಲಿ ಭೀಷ್ಮನು ಸಭೆಯಲ್ಲಿ ಎದ್ದುನಿಂತು ನೆರೆದ ಎಲ್ಲಾ ಕ್ಷತ್ರಿಯ ಕುಮಾರರನ್ನು ಸಂಬೋಧಿಸಿ—ಎಲೈ ಕ್ಷತ್ರಿಯವೀರರೇ, ಶಾಸ್ತ್ರದಲ್ಲಿ ಹೇಳಿದ ಎಂಟು ಪ್ರಕಾರದ ವಿವಾಹಗಳಲ್ಲಿ ಕನ್ನಿಕೆಯನ್ನು ಬಲಾತ್ಕಾರದಿಂದ ಅಪಹರಿಸಿಕೊಂಡು ಒಯ್ಯುವದಕ್ಕೂ ಆಸ್ಪದವಿರುವದೆಂಬದನ್ನು ನೀವು ಬಲ್ಲಿರಿ; ನಾನು ನಿಮ್ಮೆಲ್ಲರ ಎದುರಿಗೆ ಈ ಕನ್ನಿಕೆಯರನ್ನು ಬಲಾತ್ಕಾರದಿಂದ ಅಪಹರಿಸಿಕೊಂಡು ಒಯ್ಯುತ್ತೇನೆ; ಸಮರ್ಥರಾದವರು ನನ್ನ ಸಂಗಡ ಯುದ್ಧಮಾಡುವದಕ್ಕೆ ಬರಬಹುದು; ನಾನು ಆಮರಣ ಬ್ರಹ್ಮಚರ್ಯವ್ರತವನ್ನು ಕೈಕೊಂಡಿರುವೆನೆಂಬದು ನಿಮ್ಮಲ್ಲನೇಕರಿಗೆ ಗೊತ್ತುಂಟು. ಈ ಕನ್ನಿಕೆಯರನ್ನು ನನಗೋಸ್ಕರ ಒಯ್ಯುವದಿಲ್ಲ; ನನ್ನ ತಮ್ಮನಾದ ವಿಚಿತ್ರವೀರ್ಯನು ವಿಶಾಲವಾದ ಕುರುರಾಜ್ಯದ ಅಧಿಪತಿಯಾಗಿರುವನು. ಅವನಿಗಾಗಿ ಇವರನ್ನು ಒಯ್ಯುವೆನು; ಎಂದು ಹೇಳಿದನು. ಮತ್ತು ಕೂಡಲೆ ಕನ್ನಿಕೆಯರನ್ನು, ಅಲ್ಲಿಯೇ ಸಿದ್ಧಮಾಡಿಟ್ಟ ತನ್ನ ರಥದ ಮೇಲೆ ಕುಳ್ಳಿರಿಸಿಕೊಂಡು ತಾನೂ ರಥವೇರಿ ಮುಂದಕ್ಕೆ ಸಾಗಿದನು.

ಭೀಷ್ಮನ ಕೃತಿಯನ್ನು ನೋಡಿ ನೆರೆದ ಕ್ಷತ್ರಿಯವೀರರು ಸಂತಾಪಗೊಂಡರು. ಅವರ ಮುಖವೂ ಕಣ್ಣುಗಳೂ ಕೆಂಪಡರಿದಂತಾದವು. ಆದರೆ ಭೀಷ್ಮನನ್ನು ಎದುರಿಸಬಲ್ಲ ಎದೆಗಾರರು ಯಾರು? ಯಾರಿಗೂ ಮುಂದೆಹೋಗುವ ಧೈರ್ಯವಿಲ್ಲ. ಸಾಹಸಮಾಡಿ ಎದುರಿಸಿದವರು ತಡವಿಲ್ಲದೆ ತಕ್ಕ ಶಿಕ್ಷೆಯನ್ನು ಹೊಂದಿ ಹಿಂದಿರುಗಿದರು.

ಭೀಷ್ಮನು ತನ್ನನ್ನು ಕೆಣಕಿದ ಎಲ್ಲ ರಾಜರನ್ನೂ ಸೋಲಿಸಿ ಕನ್ನಿಕೆಯರನ್ನು ಕರೆದುಕೊಂಡು ನೆಟ್ಟಗೆ ಹಸ್ತಿನಾವತಿಗೆ ಬಂದನು. ಬಳಿಕ ವಿಚಿತ್ರವೀರ್ಯನ ಮು

ದುವೆಯ ಸಮಾರಂಭದ ಉದ್ಯೋಗಕ್ಕೆ ತೊಡಗಿದನು. ಆಗ ಆ ಕನ್ನಿಕೆಯರಲ್ಲಿ ಕಾಶೀರಾಜನ ಹಿರಿಯ ಮಗಳಾದ ಅಂಬೆಯು— ಸ್ವಯಂವರದಲ್ಲಿ ನಾನು ಸಾಲ್ವ ರಾಜನನ್ನು ವರಿಸಬೇಕೆಂದು ಮಾಡಿದ್ದೆನು. ಆದದರಿಂದ ನಾನು ಸಾಲ್ವರಾಜನಿ ಗೆ ಪತ್ನಿಯಾಗತಕ್ಕವಳು, ಎಂದು ತನ್ನ ಅಭಿಪ್ರಾಯವನ್ನು ತಿಳುಹಿದಳು. ಆಗ ಭೀಷ್ಮನು ಆಕೆಗೆ ಸಾಲ್ವರಾಜನ ಬಳಿಗೆ ಹೋಗಲಪ್ಪಣೆಕೊಟ್ಟನು; ಮತ್ತು ಉಳಿ ದ ಅಂಬಿಕೆ, ಅಂಬಾಲಿಕೆ ಎಂಬ ಇಬ್ಬರು ಕನ್ಯೆಯರನ್ನು ವಿಚಿತ್ರವೀರ್ಯನಿಗೆ ಮ ಹಾವೈಭವದಿಂದ ಮದುವೆಮಾಡಿದನು.

ಅಂಬೆಯು ಸಾಲ್ವರಾಜನ ಬಳಿಗೆ ಹೋದಳು. ಸಾಲ್ವನು ಆಕೆಯನ್ನು ಕು ರಿತು— ಭೀಷ್ಮನು ನಿನ್ನನ್ನು ಅಪಹರಿಸಿಕೊಂಡು ಒಯ್ದುದರಿಂದ ನೀನು ಪರನಾರಿ ಯು. ಆದದರಿಂದ ನಿನ್ನನ್ನು ನಾನು ಮದುವೆಮಾಡಿಕೊಳ್ಳುವದಿಲ್ಲವೆಂದು ಹೇಳಿದನು. ಆಗ ಆಕೆಯು ಮರಳಿ ಹಸ್ತಿನಾವತಿಗೆ ಬಂದು ಸಾಲ್ವರಾಜನು ಹೇ ಳಿದ ಮಾತನ್ನು ಭೀಷ್ಮನಿಗೆ ಹೇಳಿದಳು. ಮತ್ತು ನನ್ನ ಗತಿಯೇನು ಎಂದು ಕೇಳಿ ದಳು. ಭೀಷ್ಮನು— ನೀನು ಸಾಲ್ವರಾಜನನ್ನು ಮನಸ್ಸಿನಿಂದ ವರಿಸಿರುವೆಯಾ ದುದರಿಂದ ನಿನಗೆ ಆತನೇ ಪತಿಯು; ನಿನ್ನನ್ನು ಅನ್ಯರು ಮದುವೆಮಾಡಿಕೊಳ್ಳಲಾ ರರು. ಆದದರಿಂದ ಸಾಲ್ವನ ಕಡೆಗೇ ಹೋಗು ಎಂದು ಮತ್ತೆ ಹೇಳಿಕಳುಹಿದನು. ಸಾಲ್ವರಾಜನು ಮತ್ತೆ ಮೊದಲು ಹೇಳಿದ ಮಾತನ್ನೇ ಹೇಳಿಬಿಟ್ಟನು. ಅಂಬೆಯು ಮತ್ತೆ ಭೀಷ್ಮನ ಬಳಿಗೆ ಬಂದಳು. ಭೀಷ್ಮನಿಗೆ ಕಠಿಣಪ್ರಸಂಗವೊದಗಿತು: ತ ನ್ನಿಂದಲೇ ಅಂಬೆಗೆ ಈ ಹಾಡು ಆದದರಿಂದ ತಾನೇ ಅವಳನ್ನು ಮದುವೆಯಾಗ ಬೇಕು, ಇಲ್ಲವೆ ಯಾವದೊಂದು ಉಪಾಯದಿಂದ ಇನ್ನೊಬ್ಬನೊಡನೆ ಅವಳ ಮ ದುವೆಯಾಗುವಂತೆ ಮಾಡಬೇಕು.

ಭೀಷ್ಮನು ಸಾಲ್ವರಾಜನಿಗೆ ಹೇಳಿನೋಡಿದನು. ಆದರೆ ಸಾಲ್ವನು ಏನಾದ ರೂ ಒಪ್ಪಲಿಲ್ಲ. 'ಪರನಾರಿಯನ್ನು ಪಟ್ಟದರಾಣಿಯನ್ನಾಗಿ ಹೇಗೆ ಮಾಡಿಕೊಳ್ಳಲಿ; ನಾನು ಎಂದೂ ಈಕೆಯನ್ನು ಮದುವೆಯಾಗಲಾರೆನು' ಎಂದು ಹೇಳಿಬಿಟ್ಟನು. ಇತ್ತ ಭೀಷ್ಮನು ಘೋರಪ್ರತಿಜ್ಞೆಮಾಡಿದವನು; ಈ ಜನ್ಮದಲ್ಲಿ ಆತನಿಗೆ ಮದುವೆ ಯ ಪ್ರಸಕ್ತಿಯೇ ಇಲ್ಲ. ಅಂಬೆಯು ಉಪಾಯಗಾಣದೆ ಕೊನೆಗೆ ಅಗ್ನಿಪ್ರವೇಶ ಮಾಡುವದನ್ನು ನಿಶ್ಚಯಿಸಿದಳು. ಚಿತೆಯು ಸಿದ್ಧವಾಯಿತು. ಅಂಬೆಯು ದುಃ ಖದ ಹಾಹಾಕಾರದ ಆಕ್ರೋಶವನ್ನು ಕೇಳಿ ಪರಶುರಾಮನಿಗೆ ದಯೆ ಬರಲು ಆತ ನು ಅಲ್ಲಿಗೆ ಬಂದು ನಿನ್ನ ದುಃಖದ ಕಾರಣವೇನೆಂದು ಅಂಬೆಯನ್ನು ಕೇಳಿದನು. ಅಂಬೆಯು ಎಲ್ಲವನ್ನು ವಿವರಿಸಿ ಹೇಳಿ ಭೀಷ್ಮನೇ ತನ್ನ ದುಃಖಕ್ಕೆ ಮುಖ್ಯಕಾರಣ

ವೆಂದು ಹೇಳಿದಳು. ಪರಶುರಾಮನು ಕೈಯ ಕೊಡಲಿಯನ್ನೆತ್ತಿಹಿಡಿದು ಭೀಷ್ಮ ನನ್ನು ಕರೆಯುಕಳುಹಿದನು.

ಗುರುವಾದ ಪರಶುರಾಮನ ಅಪ್ಪಣೆಯು ಮುಟ್ಟಿದ ಕೂಡಲೆ ಭೀಷ್ಮನು ಆತನ ಚರಣಸನ್ನಿಧಿಗೆ ಬಂದನು. ಆಗ ಪರಶುರಾಮನು ಭೀಷ್ಮನಿಗೆ— ನೀನು ಈಕೆಯನ್ನು ಬಲಾತ್ಕಾರದಿಂದ ಅಪಹರಿಸಿಕೊಂಡು ಬಂದದರಿಂದ ನೀನೇ ಈಕೆಯನ್ನು ಮದುವೆಯಾಗಬೇಕು ಎಂದು ಹೇಳಿದನು. ಆಗ ಪರಶುರಾಮನ ಮಾತನ್ನು ಕೇಳಿದೊಡನೆ ಭೀಷ್ಮನು—ಶಿವ ಶಿವ! ಎಂದು ಕಿವಿಯ ಮೇಲೆ ಕೈಯಿಟ್ಟುಕೊಂಡು— ಸ್ವಾಮಿಾ, ಬೇಕಾದರೆ ನನಗೆ ಮರಣವನ್ನು ವಿಧಿಸಿರಿ; ತಮ್ಮ ಆ ಅಪ್ಪಣೆಯನ್ನು ಪಾಲಿಸುವೆನು; ಆದರೆ ನನ್ನ ಪ್ರತಿಜ್ಞೆಗೆ ವಿರೋಧವಾಗಿ ನಾನು ಈ ಜನ್ಮದಲ್ಲಿ ಮದುವೆಯಾಗಲಾರೆನ ; ಆದದರಿಂದ ತಮ್ಮ ಈ ಅಪ್ಪಣೆಯನ್ನು ಹೇಗೆ ಪಾಲಿಸಲಿ? ನನ್ನಿಂದಾಗದು, ಎಂದು ಹೇಳಿದನು.

ಇಪ್ಪತ್ತೊಂದು ಬಾರಿ ಕ್ಷತ್ರಿಯರನ್ನು ನಿರ್ಮೂಲ ಮಾಡಿದ ಪರಶುರಾಮನ ಅಪ್ಪಣೆಯನ್ನು ಮಿಾರುವದೆಂದರೇನು! ಆತನು ಕೂಡಲೆ ಕ್ರೋಧಾಂಧನಾಗಿ ಭೀಷ್ಮನನ್ನು ಯುದ್ಧಕ್ಕೆ ಕರೆದನು. ಯುದ್ಧವು ನಡೆಯಿತು. ಯುದ್ಧದಲ್ಲಿ ಭೀಷ್ಮನು ತನ್ನನ್ನು ಕಾಪಾಡಿಕೊಳ್ಳುವದಕ್ಕೆ ಪ್ರಯತ್ನಿಸಿದನೇ ಹೊರತು ಪರಶುರಾಮನ ಮೇಲೆ ಒಮ್ಮೆಯೂ ಏರಿಹೋಗಲಿಲ್ಲ. ಎಷ್ಟು ಹೋರಾಡಿದರೂ ತನ್ನ ಆಟವು ಸಾಗದಂತಾಗಲು ಪರಶುರಾಮನು ತಾನು ಸೋತೆನೆಂದು ಹೇಳಿ ಹೊರಟು ಹೋದನು.

ಪರಶುರಾಮನಂಥ ಅಸಾಧಾರಣವೀರನು ಸೋತನೆಂದ ಬಳಿಕ ಭೀಷ್ಮನನ್ನು ಶಿಕ್ಷಿಸುವವರು ಈ ಲೋಕದಲ್ಲಿ ಇನ್ನಾರೂ ಇಲ್ಲವೆಂದು ತಿಳಿದು ಕ್ಷತ್ರಿಯ ಕುಮಾರಿಯಾದ ಅಂಬೆಯು ಕಡುನೊಂದು ಮುಂದಿನ ಜನ್ಮದಲ್ಲಾದರೂ ಭೀಷ್ಮನ ಮುಯ್ಯ ತೀರಿಸುವದನ್ನು ನಿಶ್ಚಯಿಸಿ ಉರಿಯುವ ಚಿತೆಯನ್ನು ಪ್ರವೇಶಿಸಿ ದೇಹವನ್ನು ಬಿಟ್ಟಳು. ಈ ಅಂಬೆಯೇ ದ್ರುಪದರಾಜನಿಗೆ ಶಿಖಂಡಿನಿಯಾಗಿ ಹುಟ್ಟಿ ಭೀಷ್ಮನ ಮರಣಕ್ಕೆ ಕಾರಣಳಾದಳು.

ಇತ್ತ ವಿಚಿತ್ರವೀರ್ಯನು ಅಂಬಿಕೆ ಅಂಬಾಲಿಕೆಯರೊಡನೆ ಕೆಲವುಕಾಲ ಸುಖದಿಂದ ಇರುತ್ತಿರಲು ಆತನಿಗೆ ಕ್ಷಯದ ಭಾವನೆಯಾಯಿತು. ದಿನದಿನಕ್ಕೆ ರೋಗವು ಬಲಿತದರಿಂದ ಅಪುತ್ರಕನಾದ ವಿಚಿತ್ರವೀರ್ಯನು ಚಿಕ್ಕವಯಸ್ಸಿನಲ್ಲಿಯೇ ಎಲ್ಲರನ್ನೂ ಶೋಕಸಾಗರದಲ್ಲಿ ಮುಳುಗಿಸಿ ಮಾನವಲೀಲೆಯನ್ನು ಮುಗಿಸಿದನು. ರಾಜಧಾನಿಯಲ್ಲಿ ದುಃಖದ ಕೋಲಾಹಲವೆದ್ದಿತು. ಸತ್ಯವತಿಯು ಪು

ತ್ರಶೋಕದಿಂದ ವ್ಯೆವುರಿತಳು, ಭೀಷ್ಮನು ಭ್ರಾತೃಶೋಕದಿಂದ ವಿಹ್ವಲನಾದನು. ಅಂಬಿಕೆ ಅಂಬಾಲಿಕೆಯರು ಪತಿಶೋಕಾಗ್ನಿಯಿಂದ ಬೆಂದು ಹೋದರ್ರು. ರಾಜ್ಯವೆಲ್ಲ ದುಃಖಾತಿಶಯದಿಂದ ಮುಂದುಗಾಣದಂತಾಯಿತು.

ಕೆಲವು ದಿವಸಗಳ ತರುವಾಯ ಸತ್ಯವತಿಯು ತನ್ನ ಶೋಕವನ್ನು ಒಳಗೇನುಂಗಿಕೊಂಡು ಸೊಸೆಯಂದಿರನ್ನು ಸಮಾಧಾನಪಡಿಸ ತೊಡಗಿದಳು. ಒಳಿಕೊಂದು ದಿವಸ ಭೀಷ್ಮನನ್ನು ಕರೆದು ಸಮೀಪದಲ್ಲಿ ಕುಳ್ಳಿರಿಸಿಕೊಂಡು— ಮಗನೇ, ಕುರುವಂಶದ ಪೂರ್ವಪುರುಷರಿಗೆ ನಿರಾಪ್ರೋದಕವನ್ನು ಕೊಡುವವರು ನಿನ್ನ ಹೊರತು ಯಾರೂ ಉಳಿಯಲಿಲ್ಲ ಶಾಸ್ತ್ರಜ್ಞನೂ ದೂರದರ್ಶಿಯೂ ಆದ ನಿನಗೆ ಹೇಳಬೇಕಾದುದೇನೂ ಇಲ್ಲ. ಈಗ ನನ್ನ ಪ್ರಾರ್ಥನೆಯನ್ನು ತಿರಸ್ಕರಿಸದೆ ಒಂದು ಮಾತನ್ನು ನೀನು ನಡೆಯಿಸಬೇಕಾಗಿರುವದು. ನಿನ್ನ ಚಿಕ್ಕ ತಮ್ಮನು ಸಂತಾನವಿಲ್ಲದೆ ಪರಲೋಕಕ್ಕೆ ತೆರಳಿದನು. ಕುರುವಂಶವು ಉಳಿಯಬೇಕಾದುದು ಅವಶ್ಯವಾಗಿರುವದರಿಂದ ನಾನು ನಿನಗೆ ಬೇಡಿಕೊಳ್ಳುವದೇನೆಂದರೆ- ಈಗ ನೀನೇ ಸಿಂಹಾಸನದ ಮೇಲೆ ಕುಳಿತು ರಾಜ್ಯಪಾಲನೆ ಮಾಡಬೇಕು; ಮತ್ತು ಮದುವೆಮಾಡಿಕೊಂಡು ವಂಶವುಳಿಯುವಂತೆ ಮಾಡಬೇಕು

ಭೀಷ್ಮನು ಸತ್ಯವತಿಯ ಈ ನುಡಿಗಳನ್ನು ಕೇಳಿ ತಾಯೀ, ನೀನು ಹೇಳುವ ಮಾತುಗಳು ಯೋಗ್ಯವಾಗಿವೆ; ಆದರೆನಾನುಯಾವಪ್ರತಿಜ್ಞೆಯನ್ನುಮಾಡಿರುವೆನೆಂಬದನ್ನು ನೀನು ಬಲ್ಲೆ. ಹೀಗಿರುವಾಗ ನೀನು ನನ್ನ ಪ್ರತಿಜ್ಞಾಭಂಗವಾಗುವ ಮಾತುಗಳನ್ನು ಮತ್ತೆ ಹೇಳಬಾರದೆಂದು ಬೇಡಿಕೊಳ್ಳುವೆನು ಎಂದು ನುಡಿದನು. ಸತ್ಯವತಿಯು ಉಪಾಯವಿಲ್ಲದೆ ಸುಮ್ಮನಾದಳು. ಕೆಲವು ದಿವಸಗಳು ಹಾಗೆಯೇ ಕಳೆದುಹೋದವು.

---

( ೮ )

ವಿಚಿತ್ರವೀರ್ಯನ ಮರಣದ ತರುವಾಯ ಅವನ ಹೆಂಡಂದಿರ ಹೊಟ್ಟೆಯಲ್ಲಿ ಕೃಷ್ಣದ್ವೈಪಾಯನ ಋಷಿಯ ಅನುಗ್ರಹದಿಂದ ಇಬ್ಬರು ಗಂಡುಮಕ್ಕಳು ಹುಟ್ಟಿದರು. ಭೀಷ್ಮನು ಮಕ್ಕಳಿಗೆ ನಾಮಕರಣಾದಿಗಳನ್ನು ಮಾಡಿದನು. ಅಂಬಿಕೆಯ ಮಗನಿಗೆ ಧೃತರಾಷ್ಟ್ರನೆಂದೂ, ಅಂಬಾಲಿಕೆಯ ಮಗನಿಗೆ ಪಾಂಡು ಎಂದೂ ಹೆಸರು. ಧೃತರಾಷ್ಟ್ರನು ಹುಟ್ಟುಗುರುಡನು. ಭೀಷ್ಮನು ಪಾಂಡುಧೃತರಾಷ್ಟ್ರರನ್ನು ಹೊಟ್ಟೆಯಮಕ್ಕಳಂತೆ ಸಲಹಿದನು. ಅವರು ದೊಡ್ಡವರಾದ ಬಳಿಕ

ಸ್ವಲ್ಪ ದಿವಸಗಳಲ್ಲಿ ಭೀಷ್ಮನ ತಕ್ಕವ್ಯವಸ್ಥೆಯಿಂದ ಎಲ್ಲಾ ವಿದ್ಯೆಗಳಲ್ಲಿ ನಿಷ್ಣಾತರಾದರು.

ಧೃತರಾಷ್ಟ್ರನು ಹುಟ್ಟುಗುರುಡನಾದದರಿಂದ ಅರಸುತನಕ್ಕೆ ಅಯೋಗ್ಯನಾದನು. ಪಾಂಡುವು ಸಿಂಹಾಸನವನ್ನೇರಿದನು. ಭೀಷ್ಮನು ಮೊದಲಿನಂತೆ ರಾಜ್ಯಭಾರದಲ್ಲಿ ಸಹಾಯುವನ್ನು ಮಾಡುತ್ತಿದ್ದನು. ಪಾಂಡುವಿನ ಆಳಿಕೆಯಲ್ಲಿ ಪ್ರಜೆಗಳು ಸುಖಸಮಾಧಾನಗಳನ್ನು ಹೊಂದಿದರು. ಪಾಂಡು ಧೃತರಾಷ್ಟ್ರರಿಗೆ ಒಬ್ಬ ತಮ್ಮನಿದ್ದನು. ಆತನ ಹೆಸರು ವಿದುರ. ಅವನು ಸತ್ಯವತಿಯು ಗೆಳತಿಯಾದ ಒಬ್ಬ ದಾಸಿಯ ಮಗನು. ಅವನು ಮಹಾಬುದ್ಧಿಶಾಲಿಯು. ಕುರುವಂಶದ ಮೇಲೆ ಅವನು ಬಹಳ ಪ್ರೀತಿವಿಶ್ವಾಸಗಳುಳ್ಳವನೂ ಕುರುವಂಶದ ಹಿತಚಿಂತಕನೂ ಆಗಿದ್ದನು. ಭೀಷ್ಮನು ವಿದುರನ ಸಲಹೆಯ ಹೊರತು ರಾಜ್ಯಭಾರದಲ್ಲಿ ಮಹತ್ವದ ಯಾವ ಕಾರ್ಯವನ್ನೂ ಮಾಡುತ್ತಿರಲಿಲ್ಲ.

ಧೃತರಾಷ್ಟ್ರನೂ ಪಾಂಡುವೂ ಪ್ರಾಯಕ್ಕೆ ಬಂದರು. ಭೀಷ್ಮನು ಅವರ ಮದುವೆಯ ಆಲೋಚನೆಯನ್ನು ವಿದುರನೊಡನೆ ಮಾಡಿ, ಸತ್ಯವತಿಗೂ ಆ ಮಾತನ್ನು ತಿಳುಹಿ ತಕ್ಕ ಕನ್ನಿಕೆಯರನ್ನು ನೋಡತೊಡಗಿದನು.

ಗಾಂಧಾರದೇಶದ ರಾಜನಾದ ಸುಬಲನು ಕುಲಮರ್ಯಾದೆಯಲ್ಲಿ ಕುರುವಂಶಕ್ಕೆ ಸಮಾನನಾದದರಿಂದ ಭೀಷ್ಮನು ಸುಬಲನ ಮಗಳನ್ನು ಧೃತರಾಷ್ಟ್ರನಿಗೆ ಮದುವೆಮಾಡಿಕೊಳ್ಳಬಹುದೆಂದು ಆಲೋಚಿಸಿ ಆ ವಿಷಯಕ್ಕೆ ಸುಬಲನೊಡನೆ ಪ್ರಸ್ತಾವ ನಡೆಯಿಸಿದನು. ಗಾಂಧಾರರಾಜನು ಆನಂದದಿಂದ ಅದಕ್ಕೆ ಒಪ್ಪಿಕೊಂಡನು.

ಗೊತ್ತುಮಾಡಿದ ಮುಹೂರ್ತಕ್ಕೆ ಗಾಂಧಾರರಾಜಪುತ್ರನಾದ ಶಕುನಿಯು ತನ್ನ ತಂಗಿಯಾದ ಗಾಂಧಾರಿಯನ್ನು ಕರೆದುಕೊಂಡು ಹಸ್ತಿನಾವತಿಗೆ ಬಂದು ಧೃತರಾಷ್ಟ್ರನಿಗೆ ಮದುವೆಮಾಡಿಕೊಟ್ಟನು.

ಹುಟ್ಟುಗುರುಡನಾದ ಗಂಡನು ದೊರೆತನೆಂದು ಗಾಂಧಾರಿಯು ಅಸಮಾಧಾನಬಡಲಿಲ್ಲ. ಆಕೆಯು ಪತಿಯೇ ದೇವರೆಂದು ಬಗೆದು ಆತನ ಸೇವೆಯನ್ನು ಮನಮುಟ್ಟಿ ಮಾಡಿಕೊಂಡು ಇದ್ದಳು. ಎಲ್ಲರೂ ಗಾಂಧಾರಿಯ ಗುಣಕ್ಕೆ ಮೆಚ್ಚಿದರು. ಧೃತರಾಷ್ಟ್ರನು ಇಂತಹ ಪತಿವ್ರತೆಯಾದ ಹೆಂಡತಿಯು ದೊರೆತದರಿಂದ ಬಹಳ ಸಂತೋಷಪಟ್ಟನು.

ಧೃತರಾಷ್ಟ್ರನ ಮದುವೆಮಾಡಿದ ತರುವಾಯ ಭೀಷ್ಮನು ಪಾಂಡುವಿನ ಮದುವೆಗೆ ತೊಡಗಿದನು. ಆ ಕಾಲದಲ್ಲಿ ಕುಂತೀಭೋಜನೆಂಬ ಅರಸನು ತನ್ನ ಮಗಳ ಸ್ವಯಂವರಕ್ಕಾಗಿ ರಾಜಕುಮಾರರನ್ನೆಲ್ಲ ಕರೆಯಿಸಿದ್ದನು. ಆತನ ಮಗಳು ಕುಂತಿಯು ಲಾವಣ್ಯವತಿಯೆಂದೂ ಗುಣವತಿಯೆಂದೂ ಹೆಸರಾಗಿದ್ದಳು. ಭೀಷ್ಮನು ಆಕೆಯನ್ನು ಪಾಂಡುವಿಗೆ ಮಾಡಿಕೊಳ್ಳಬೇಕೆಂದು ಆಲೋಚಿಸಿ ಪಾಂಡುವನ್ನು ಕರೆದುಕೊಂಡು ಕುಂತೀಭೋಜರಾಜನ ಮಗಳ ಸ್ವಯಂವರ ಮಂಟಪಕ್ಕೆ ಹೋದನು.

ರಾಜಕುಮಾರರು ತಮ್ಮ ತಮ್ಮ ಆಸನಗಳ ಮೇಲೆ ಕುಳಿತಿದ್ದರು. ಕುಂತಿಯು ವರಮಾಲ್ಯವನ್ನು ಕೈಯಲ್ಲಿ ಹಿಡಿದುಕೊಂಡು ಸ್ವಯಂವರಮಂಟಪವನ್ನು ಪ್ರವೇಶಿಸಿದಳು. ಕುಂತಿಯ ರೂಪಲಾವಣ್ಯಗಳನ್ನು ಕಂಡು ರಾಜಕುಮಾರರೆಲ್ಲ ವಿಸ್ಮಯಬಟ್ಟರು. ತನ್ನನ್ನು ವರಿಸುವಳೆಂದು ಪ್ರತಿಒಬ್ಬನು ಮನಸ್ಸಿನಲ್ಲಿ ಆಶಿಸತೊಡಗಿದನು. ಬಂದಿಗಳು ರಾಜಕುಮಾರರ ವಂಶಪರಾಕ್ರಮಾದಿಗಳನ್ನು ವರ್ಣಿಸತೊಡಗಿದರು. ರಾಜಕುಮಾರಿಯು ಒಬ್ಬೊಬ್ಬನನ್ನೇ ದಾಟುತ್ತ ಮುಂದೆ ಸಾಗಿ ಪಾಂಡುರಾಜನ ಆಸನದ ಹತ್ತಿರ ಬಂದಳು. ಪಾಂಡುರಾಜನ ತಾರುಣ್ಯಭರವನ್ನೂ, ಆತನ ಸೌಂದರ್ಯಾದಿಗಳನ್ನೂ ನೋಡಿದಳು; ಆತನ ವಂಶಮರ್ಯಾದೆಯನ್ನೂ ಪರಾಕ್ರಮಾದಿಗುಣಗಳ ವರ್ಣನೆಯನ್ನೂ ಕೇಳಿದಳು. ತನಗೆ ತಕ್ಕವರನೆಂದು ನಿರ್ಣಯಿಸಿದಳು.

ಇನ್ನಾರನ್ನೂ ನೋಡಲಿಕ್ಕೆ ಮುಂದೆ ಹೋಗಲಿಲ್ಲ ನಸುಲಜ್ಜೆಯಿಂದ ವರಮಾಲ್ಯವನ್ನು ಆತನ ಕೊರಳಿಗೆ ಹಾಕಿದಳು. ಮಂಗಳವಾದ್ಯಗಳು ಆಕಾಶಮಂಡಲವನ್ನು ಭೇದಿಸ ವಂತೆ ಮೊಳಗಿದವು. ತಕ್ಕ ಅಳಿಯನು ದೊರೆತನೆಂದು ಕುಂತೀಭೋಜನಿಗೆ ಪರಮಾನಂದವಾಯಿತು. ಬಳಿಕ ಶಾಸ್ತ್ರೋಕ್ತವಾಗಿ ವಿವಾಹಸಮಾರಾಂಭವು ನೆರವೇರಿತು. ಕುಂತೀಭೋಜನು ದಾಸದಾಸಿಯರನ್ನು ಬಳುವಳಿಯನ್ನೂ ಕೊಟ್ಟು ಮಗಳನ್ನು ಅಳಿಯನ ಸಂಗಡ ಅತ್ತೆಯ ಮನೆಗೆ ಕಳುಹಿದನು. ಪಾಂಡುರಾಜನು ಹೆಂಡತಿಯನ್ನು ಕರೆದುಕೊಂಡು ಮಹಾವೈಭವದಿಂದ ಹಸ್ತಿನಾವತಿಗೆ ಬಿಜಯಮಾಡಿದನು. ಸತ್ಯವತಿಯು ಮಗನನ್ನೂ ಸೊಸೆಯನ್ನೂ ಸಮಾರಂಭದಿಂದ ಬರಮಾಡಿಕೊಂಡಳು. ಭೀಷ್ಮನು ಇಬ್ಬರು ತಮ್ಮಂದಿರ ಮದುವೆಯನ್ನು ಮಾಡಿ ಕೃತಕೃತ್ಯನಾದನು. ಕುಂತಿಗೆ ತಕ್ಕ ಕಾಲಕ್ಕೆ ಮಕ್ಕಳಾಗಲಿಲ್ಲ ಆಗ ಸತ್ಯವತಿಯು ಚಿಂತೆಗೊಳಗಾಗಿ ವಂಶರಕ್ಷಣಕ್ಕಾಗಿ ಇನ್ನೊಂದು ಮದುವೆಯ ಮಾಡಿಕೊಳ್ಳೆಂದು ಪಾಂಡುವಿಗೆ ಹೇಳಿದಳು. ಪಾಂಡುರಾಜನು ತಾಯಿಯ ಅಪ್ಪಣೆಯ ಮೇರೆಗೆ ಮದ್ರದೇಶಾಧಿಪತಿಯಾದ ಶಲ್ಯರಾಜನ ತಂಗಿಯಾದ

ಮಾದ್ರಿಯನ್ನು ಮದುವೆಮಾಡಿಕೊಂಡನು. ಕುಂತಿಯೂ ಮಾದ್ರಿಯೂ ಪರಸ್ಪರ ಬಹಳ ಪ್ರೀತಿಯಿಂದ ಇದ್ದರು. ಅವರಿಬ್ಬರ ಪ್ರೀತಿಯ ಸೇವೆಯಲ್ಲಿ ಪಾಂಡುರಾಜನು ಬಹಳ ಸುಖದಿಂದ ಕಾಲಕಳೆಯುತ್ತಿದ್ದನು.

---

( ೯ )

ಎಷ್ಟೋ ದಿವಸಗಳು ಹೋದವು. ಕುಂತಿಯ ಹೊಟ್ಟೆಯಲ್ಲಿ ಧರ್ಮ, ಭೀಮ, ಅರ್ಜುನ ಎಂಬ ಮೂವರು ಮಕ್ಕಳೂ, ಮಾದ್ರಿಯ ಹೊಟ್ಟೆಯಲ್ಲಿ ನಕುಲ ಸಹದೇವರೆಂಬ ಅವಳಿಮಕ್ಕಳೂ ಹುಟ್ಟಿದರು. ಈ ಐವ್ವರಿಗೆ ಪಾಂಡವರೆಂದು ಹೆಸರು. ಇತ್ತ ಗಾಂಧಾರಿಗೆ ದುರ್ಯೋಧನ ದುಃಶಾಸನ ಮೊದಲಾದ ನೂರುಜನ ಮಕ್ಕಳಾದರು. ಇವರನ್ನು ಕೌರವರೆಂದು ಕರೆಯುತ್ತಿದ್ದರು. ಬಹುಜನ ಮಕ್ಕಳು ಹುಟ್ಟಿದದರಿಂದ ಪಾಂಡು ಧೃತರಾಷ್ಟ್ರರಿಗೂ ಸತ್ಯವತಿ ಭೀಷ್ಮ ವಿದುರ ಮೊದಲಾದ ಹಿರಿಯರಿಗೂ ಬಹಳ ಸಂತೋಷವಾಯಿತು. ಮುಂದೆಯೂ ಈ ಮಕ್ಕಳಿಂದ ಸುಖವಾಗುವದೆಂದು ಅವರು ಭಾವಿಸಿದ್ದರು. ಆದರೆ ಬ್ರಹ್ಮದೇವರ ಸಂಕಲ್ಪ ವೇಬೇರೆಯಾಗಿತ್ತು. ಆವನು ಈ ಮಕ್ಕಳಿಂದ ಮುಂದೆ ಮುಂದೆ ಅತಿ ದುಃಖಮಯವಾದ ಪರಿಣಾಮವು ಒದಗುವದೆಂದು ಬರೆದಿಟ್ಟಿದ್ದನು.

ಕೆಲವು ದಿವಸಗಳಲ್ಲಿ ಪಾಂಡುರಾಜನು ಪರಲೋಕಕ್ಕೆ ತೆರಳಿದನು. ಮಾದ್ರಿಯು ತನ್ನ ಮಕ್ಕಳನ್ನು ಕುಂತಿಯ ವಶಕ್ಕೆ ಒಪ್ಪಿಸಿ ತಾನು ಪತಿಯ ಚಿತೆಯಲ್ಲಿ ಪ್ರವೇಶಮಾಡಿದಳು.

ಕೌರವರೂ ಪಾಂಡವರೂ ಕ್ರಮದಿಂದ ದೊಡ್ಡವರಾಗಹತ್ತಿದರು. ಒಬ್ಬರೊಬ್ಬರು ಸೇರಿಕೊಂಡು ಬಾಲಕ್ರೀಡೆಗಳನ್ನಾಡುವರು. ಪಾಂಡವರು ಆಟಗಳಲ್ಲಿ ತುಂಟತನವನ್ನು ಮಾಡದೆ ಗೆಲ್ಲುತ್ತಿರುವದನ್ನು ಕಂಡು ಕೌರವರಿಗೆ ಅವರ ವಿಷಯದಲ್ಲಿ ಅಸಮಾಧಾನವೆನಿಸುತ್ತಿತ್ತು. ಅದರಲ್ಲಿಯೂ ಭೀಮನ ಬಲಕ್ಕೂ ಅರ್ಜುನನ ಬಾಣಪ್ರಯೋಗಕ್ಕೂ ಕೌರವರಲ್ಲಿ ಯಾರೂ ಸರಿಯೆನಿಸಲಿಲ್ಲ. ಇದರಿಂದಂತೂ ದುರ್ಯೋಧನ ಮೊದಲಾದವರು ಪಾಂಡವರನ್ನು ಕಂಡು ಸೇರದಂತಾದರು. ಪಾಂಡವರ ಮೇಲೆ ದ್ವೇಷಮಾಡತೊಡಗಿದರು.

ಕೌರವರೂ ಪಾಂಡವರೂ ದೊಡ್ಡವರಾದ ಹಾಗೆ ಭೀಷ್ಮಾಚಾರ್ಯರು ಇವರಿಗೆ ಎಲ್ಲವಿದ್ಯೆಗಳನ್ನೂ ಕಲಿಸುವ ವ್ಯವಸ್ಥೆಮಾಡಿದರು. ಈ ಸಮಯದಲ್ಲಿ ಅಸ್ತ್ರವಿ

ದ್ಯೆಯಲ್ಲಿ ಅದ್ವಿತೀಯರೆನಿಸಿದ ದ್ರೋಣಾಚಾರ್ಯರೆಂಬವರು ಹಸ್ತಿನಾವತಿಗೆ ಬಂದಿದ್ದರು. ಭೀಷ್ಮರು ದ್ರೋಣಾಚಾರ್ಯರ ಅಸ್ತ್ರವಿದ್ಯಾಪ್ರಾವೀಣ್ಯವನ್ನು ಕಂಡು ಸಂತೋಷಪಟ್ಟು ಕೌರವ ಪಾಂಡವರ ಅಸ್ತ್ರವಿದ್ಯಾಭ್ಯಾಸವನ್ನು ಅವರಿಗೆ ಒಪ್ಪಿಸಿದರು. ಸ್ವಲ್ಪದಿವಸಗಳಲ್ಲಿ ಎಲ್ಲರೂ ಶಸ್ತ್ರಾಸ್ತ್ರಗಳಲ್ಲಿಯೂ ಇತರ ವಿದ್ಯೆಗಳಲ್ಲಿಯೂ ನಿಪುಣರಾದರು. ದ್ರೋಣಾಚಾರ್ಯರು ತಾವು ಅಸ್ತ್ರವಿದ್ಯೆಯನ್ನೆಲ್ಲ ಕಲಿಸಿದ ಬಳಿಕ ಎಲ್ಲರೂ ಅದರಲ್ಲಿ ಪ್ರವೀಣರಾದ ವರ್ತಮಾನವನ್ನು ಭೀಷ್ಮರಿಗೆ ತಿಳುಹಿದರು. ಭೀಷ್ಮರು ಮೊಮ್ಮಕ್ಕಳ ಅಸ್ತ್ರವಿದ್ಯಾಕೌಶಲ್ಯವನ್ನು ಸಮಾರಂಭದಿಂದ ನೋಡಬೇಕೆಂದು ಬಯಸಿ ಅದಕ್ಕೋಸ್ಕರ ಒಂದು ದಿವಸವನ್ನು ಗೊತ್ತುಮಾಡಿದರು.

ಒಂದು ವಿಸ್ತೀರ್ಣವಾದ ಬಯಲಲ್ಲಿ ರಂಗಸ್ಥಳವು ನಿರ್ಮಿಸಲ್ಪಟ್ಟಿತು. ಗೊತ್ತು ಮಾಡಿದ ದಿವಸ ಎಲ್ಲರೂ ಸೇರಿದರು. ಎಷ್ಟೋ ರಾಜರೂ ಕರೆಯಿಸಲ್ಪಟ್ಟಿದ್ದರು. ಕುಮಾರರು ನೆರೆದ ಜನರೆದುರಿಗೆ ತಮ್ಮ ಅಸ್ತ್ರಕೌಶಲವನ್ನು ತೋರಿಸಲಾರಂಭಿಸಿದರು. ಎಲ್ಲರೂ ಭಾಪು ಭಾಪು ಎಂದು ಕೊಂಡಾಡಿದರು. ದ್ರೋಣಾಚಾರ್ಯರಿಗೆ ಬಹಳ ಸಂತೋಷವಾಯಿತು. ಅವರಲ್ಲಿಯೂ ತಮ್ಮ ಪ್ರಿಯಶಿಷ್ಯನಾದ ಅರ್ಜುನನ ಅಸ್ತ್ರವಿದ್ಯಾನೈಪುಣ್ಯಕ್ಕೆ ಎಲ್ಲರೂ ಆಶ್ಚರ್ಯಪಟ್ಟು ತಲೆದೂಗಿದುದನ್ನು ನೋಡಿ ಅವರ ಆನಂದವು ಉಕ್ಕೇರಿತು. ಅರ್ಜುನನ ಪ್ರಶಂಸೆಯಾಗುವದನ್ನು ನೋಡಿ ದುರ್ಯೋಧನಾದಿಗಳಿಗೆ ಮಾತ್ರ ಬಹಳ ವ್ಯಥೆಯಾಯಿತು. ಈ ಮತ್ಸರವೇ ಮುಂದೆ ವಿಶಾಲವಾಗಿ ಬೆಳೆವ ವಿಷವೃಕ್ಷದ ಬೀಜವು.

ಈ ರಾಜಕುಮಾರರಲ್ಲೆಲ್ಲ ಧರ್ಮರಾಜನೇ ಎಲ್ಲಕ್ಕೂ ಹಿರಿಯನು. ರಾಜ್ಯಾಧಿಕಾರಿಯಾಗಿದ್ದ ಪಾಂಡುವಿನ ಹಿರಿಯಮಗನು. ಆದದರಿಂದ ಅವನಿಗೆ ಯುವರಾಜ ಪಟ್ಟವನ್ನು ಕಟ್ಟಿದರು. ಪ್ರಜೆಗಳು ಧರ್ಮರಾಜನ ಸೌಜನ್ಯಕ್ಕೂ ಶುದ್ಧವಾದ ನಡೆತೆಗೂ ಮೆಚ್ಚಿ ಬಹಳವಾಗಿ ಕೊಂಡಾಡತೊಡಗಿದರು. ಇದರಿಂದಂತೂ ದುರ್ಯೋಧನನು ಬಹಳ ಅಸಮಾಧಾನಪಟ್ಟನು. ಅವನ ಮತ್ಸರವು ಮಸ್ತಕಕ್ಕೇರಿತು.

ಕೆಲವು ದಿವಸಗಳ ತರುವಾಯ ಕೌರವನು ಪಾಂಡವರನ್ನು ಉಪಾಯದಿಂದ ನಾಶಗೊಳಿಸಬೇಕೆಂಬ ದುರಾಲೋಚನೆಯಿಂದ ತಂದೆಯಾದ ಧೃತರಾಷ್ಟ್ರನ ಅನುಮತಿಯನ್ನು ಪಡೆದುಕೊಂಡು ಕುಶಲತನದಿಂದ ಪಾಂಡವರನ್ನೂ ಕುಂತೀದೇವಿಯನ್ನೂ ವಾರಣಾವತವೆಂಬ ಪಟ್ಟಣಕ್ಕೆ ಕಳುಹಿದರು. ಯುಧಿಷ್ಠಿರನು ಸಂತೋಷದಿಂದ ಅಲ್ಲಿಗೆ ಹೋದನು. ಭೀಷ್ಮಾಚಾರ್ಯರು ದುರ್ಯೋಧನನ ದುರಾಲೋಚನೆಯನ್ನೂ ಅದರ ಪರಿಣಾಮವನ್ನೂ ಭಾವಿಸಿ ಬಹಳ ವ್ಯಥೆಪಟ್ಟರು.

ಪಾಂಡವರ ವಿಷಯವಾಗಿ ಕೌರವರು ನಡೆಸಿದ ದುರಾಲೋಚನೆಯನ್ನು ಕುರುಕುಲ
ದ ಅಭಿಮಾನವುಳ್ಳ ವಿದುರನು ತಿಳಿದು ಬಹಳ ನೊಂದುಕೊಂಡು ಆದುರಾಲೋ
ಚನೆಯನ್ನು ಪಾಂಡವರು ವಾರಣಾವತಕ್ಕೆ ಹೊರಟಾಗ ಅವರಿಗೆ ತಿಳಿಸಿ ಎಚ್ಚರ
ಗೊಳಿಸಿದನು. ಯುಧಿಷ್ಠಿರನು ತಾಯಿಯನ್ನೂ ತಮ್ಮಂದಿರನ್ನೂ ಕರೆದುಕೊಂ
ಡು ವಾರಣಾವತಕ್ಕೆ ಬಂದನು. ಆ ಪಟ್ಟಣದ ಜನರು ಆದರದಿಂದ ಪಾಂಡವರ
ನ್ನು ಬರಮಾಡಿಕೊಂಡರು. ದುರ್ಯೋಧನನ ನಂಬಿಗೆಯ ಸೇವಕನೊಬ್ಬನು ವಾ
ರಣಾವತದಲ್ಲಿ ಒಂದು ಅರಗಿನ ಮನೆಯನ್ನು ಪಾಂಡವರ ಸಲುವಾಗಿ ಕಟ್ಟಿದ್ದನು.
ಪಾಂಡವರು ಅಲ್ಲಿಯೇ ಇಳಿದುಕೊಂಡರು. ಅಲ್ಲಿರುವಾಗ ಒಂದು ದಿವಸ ರಾತ್ರಿ
ದುರ್ಯೋಧನನ ಸೇವಕನು ಆ ಅರಗಿನ ಮನೆಗೆ ಬೆಂಕಿಯ ಹೊತ್ತಿಸಿದನು. ಪಾಂ
ಡವರು ಒಳಗೆ ಮಲಗಿದ್ದರು. ಆದರೆ ಅವರು ಮೊದಲಿಂದಲೇ ಎಚ್ಚರದಿಂದ ಇ
ದ್ದದರಿಂದ ಕೂಡಲೆ ಗುಪ್ತದ್ವಾರದಿಂದ ಹೊರಹೊರಟು ಓಡಿ ಹೋಗಿ ಜೀವ
ವುಳಿಸಿಕೊಂಡು ಬ್ರಾಹ್ಮಣರ ವೇಷವನ್ನು ಧರಿಸಿ ದೇಶದೇಶಗಳನ್ನು ಸುತ್ತುತ್ತ
ನಡೆದರು.

ಹೀಗೆ ದೇಶಸಂಚಾರ ಮಾಡುತ್ತ ಮಾಡುತ್ತ ಪಾಂಡವರು ಪಾಂಚಾಲರಾ
ಜ್ಯಕ್ಕೆ ಬಂದರು. ಅಲ್ಲಿ ಆದೇಶದ ಅರಸನ ಮಗಳ ಸ್ವಯಂವರವು ನಡೆದಿತ್ತು.
ಹಲವು ದೇಶಗಳಿಂದ ರಾಜಕುಮಾರರು ಬಂದಿದ್ದರು. ಭೀಷ್ಮ, ದ್ರೋಣ, ಕರ್ಣ,
ದುರ್ಯೋಧನ ಮೊದಲಾದವರೆಲ್ಲರೂ ಅಲ್ಲಿಗೆ ಬಂದಿದ್ದರು. ಪಾಂಡವರು ತಾಯಿ
ಯ ಅಪ್ಪಣೆಯನ್ನು ಪಡೆದುಕೊಂಡು ಸ್ವಯಂವರಮಂಟಪಕ್ಕೆ ಬಂದು ಬ್ರಾಹ್ಮಣಸ
ಭೆಯಲ್ಲಿ ಕುಳಿತುಕೊಂಡರು.

ತಕ್ಕಸಮಯದಲ್ಲಿ ಪಾಂಚಾಲರಾಜಪುತ್ರಿಯಾದ ಕೃಷ್ಣೆಯು ವರಮಾಲ್ಯವ
ನ್ನು ಕೈಯಲ್ಲಿ ಹಿಡಿದುಕೊಂಡು ಮಂಟಪಕ್ಕೆ ಬಂದಳು. ಯಾರ ದೈವವು ತೆರೆದಿ
ದೆಯೋ ಎಂದು ಎಲ್ಲರೂ ಎದುರು ನೋಡುತ್ತಿದ್ದರು. ಆಗ ಪಾಂಚಾಲರಾಜಪು
ತ್ರನಾದ ಧೃಷ್ಟದ್ಯುಮ್ನನು ಸಭೆಯನ್ನು ಪ್ರವೇಶಿಸಿ ಉಚ್ಚಸ್ವರದಿಂದ—ಎಲೈ ವೀ
ರಾಧಿವೀರರೇ ಕೇಳಿರಿ- ಇಲ್ಲಿ ನಿಮ್ಮ ಮುಂದೆ ಇಟ್ಟಿರುವ ಬಿಲ್ಲಿಗೆ ಹೆದೆಯೇರಿಸಿ ಬಾ
ಣಹೂಡಿ ಮೇಲ್ಗಡೆಯಲ್ಲಿ ಭ್ರಮಿಸುತ್ತಿರುವ ಚಕ್ರದ ರಂಧ್ರದೊಳಗಿಂದ ಪಾರಾಗು
ವಂತೆ ಎಸೆದು ಐದುಗಾವುದ ಎತ್ತರದಮೇಲಿರುವ ಬಂಗಾರದ ಮೀನಿನ ಕಣ್ಣ
ನ್ನು ಹೊಡೆಯುವ ವೀರಶ್ರೇಷ್ಠನನ್ನು ನನ್ನ ತಂಗಿಯು ವರಿಸುವಳು. ಈಗ ನೀವು
ನಿಮ್ಮ ಸಾಮರ್ಥ್ಯವನ್ನು ಪ್ರಕಟಗೊಳಿಸಿರಿ ಎಂದು ಹೇಳಿದನು.

ಆಗ ಒಬ್ಬೊಬ್ಬರೇ ವೀರರು ತಮ್ಮ ತಮ್ಮ ಆಸನಗಳಿಂದಿಳಿದು ಧನುಸ್ಸಿನ ಹ

ತ್ರಿರ ಬಂದರು. ಆದರೆ ಗುರಿಹೊಡೆಯುವ ಕೆಲಸವು ಯಾರಿಂದಲೂ ಆಗಲಿಲ್ಲ. ದುರ್ಯೋಧನಾದಿವೀರರು ಕೂಡ ಕೈಯಲ್ಲಾಗದೆ ಹಿಂದಿರುಗಿ ಬಂದರು. ಆಗ ಭೀಷ್ಮಾಚಾರ್ಯರು ಸಭೆಯಲ್ಲಿ ಎದ್ದುನಿಂತು ನೆರೆದ ರಾಜರನ್ನುದ್ದೇಶಿಸಿ- ನಾನು ಈ ಜನ್ಮದಲ್ಲಿ ಮದುವೆ ಮಾಡಿಕೊಳ್ಳುವದಿಲ್ಲವೆಂದು ಪ್ರತಿಜ್ಞೆಮಾಡಿರುವದು ನಿಮಗೆಲ್ಲ ಗೊತ್ತುಂಟು. ನಾನು ದುರ್ಯೋಧನ ಮಹಾರಾಜನ ಸಲುವಾಗಿ ಈಗ ಈ ಪಣವನ್ನು ಗೆಲ್ಲಬೇಕೆಂದು ಮಾಡಿರುವೆನು. ನಾನು ಈ ಪಣವನ್ನು ಜಯಿಸಿದರೆ ಈ ಕನ್ನಿಕೆಯನ್ನು ದುರ್ಯೋಧನ ಮಹಾರಾಜನಿಗೆ ಮದುವೆಮಾಡುವೆನು; ಎಂದು ಹೇಳಿ ಧನುಷ್ಯದ ಕಡೆಗೆ ಹೊರಟನು. ಆದರೆ ಎದುರಿಗೆ ಶಿಖಂಡಿಯನ್ನು ನೋಡಿದನು.

ದ್ರುಪದ ರಾಜನ ಮಗಳಾಗಿದ್ದ ಶಿಖಂಡಿನಿಯು ಸ್ಥೂಲಕರ್ಣನೆಂಬ ಯಕ್ಷನ ವರದಿಂದ ಪುಂಸ್ತ್ವವನ್ನು ಪಡೆದು ಶಿಖಂಡಿಯೆನಿಸಿದ್ದಳು. ಭೀಷ್ಮನು ತನ್ನ ಧನುಷ್ಯದ ಭಯಂಕರವಾದ ಟಂಕಾರಕ್ಕೆ ಶಿಖಂಡಿಯ ಪ್ರಾಣವಿಯೋಗವಾಗುವದೆಂದೂ, ಆಗ ತನಗೆ ಸ್ತ್ರೀಹತ್ಯಾದೋಷವು ಪ್ರಾಪ್ತವಾಗುವದೆಂದೂ ಭಾವಿಸಿ ಧನುಷ್ಯವನ್ನು ಬಿಟ್ಟು ಬಂದನು. ಆಗ ಕರ್ಣನು ಗುರಿಹೊಡೆಯುವದಕ್ಕೆ ಎದ್ದು ಬಂದನು. ಆಗ ದ್ರೌಪದಿಯು, ಆತನ ಕುಲಹೀನತೆಯನ್ನುಲ್ಲೇಖಿಸಿ ಈತನು ಲಕ್ಷ್ಯವನ್ನು ಭೇದಿಸಿದರೂ ಪತಿಯನ್ನಾಗಿ ವರಿಸುವದಿಲ್ಲವೆಂದು ಹೇಳಿದಳು. ಕರ್ಣನು ಆ ಮಾತನ್ನು ಕೇಳಿ ದಿಗ್ಭ್ರಾಂತನಾಗಿ ಮರಳಿ ಹೋದನು. ಅವನಿಗೆ ಆಗ ಆದ ಅಪಮಾನವನ್ನೂ ಸಂತಾಪವನ್ನೂ ವರ್ಣಿಸುವದು ಅಸಾಧ್ಯವು.

ಪಣವನ್ನು ಗೆಲ್ಲುವದು ನೆರೆದ ರಾಜಸಭೆಯಲ್ಲಿ ಕ್ಷತ್ರಿಯಕುಮಾರರಿಗೆ ಯಾರಿಗೂ ಸಾಧ್ಯವಾಗದಿರಲು ವೀರಶಿರೋಮಣಿಯಾದ ಅರ್ಜುನನು ಧರ್ಮರಾಜನ ಸನ್ನೆಯಿಂದ ಬ್ರಾಹ್ಮಣ ಸಭೆಯಿಂದ ಎದ್ದು ಧನುಷ್ಯದ ಕಡೆಗೆ ಸಾಗಿದನು. ಅರ್ಜುನನೆಂಬದು ಯಾರಿಗೂ ತಿಳಿಯಲಿಲ್ಲ. ಎಲ್ಲರೂ ಅರೆಹುಚ್ಚನೆಂದು ಚೇಷ್ಟೆಯಮಾಡಿ ಮುಂದಕ್ಕೆ ಹೋಗಗೊಡಲೊಲ್ಲರು. ಆಗ ಬ್ರಾಹ್ಮಣ ವೇಷದ ಯುಧಿಷ್ಠಿರನು ಮುಂದೆ ಬಂದು- ಈತನನ್ನು ಬಿಡಿರಿ, ನಮ್ಮದೇನು ಹೋಗುವದು? ದೊಡ್ಡ ದೊಡ್ಡ ವೀರಾಧಿವೀರರು ಕೈಸಾಗದೆ ಮರಳಿಹೋಗಿರುವದನ್ನು ಕಣ್ಣಾರೆ ಕಂಡೂ, ಏಳುವ ಸಾಹಸವನ್ನು ಮಾಡಿದ ಈತನಲ್ಲಿ ಆ ಸಾಮರ್ಥ್ಯವು ಉಂಟೋ ಎಂಬ ವಿಷಯದಲ್ಲಿ ಸಂಶಯವು ಬರುವಂತಿದೆ. ಮರುಳತನದಿಂದ ಹೊರಟಿದ್ದರೆ ಈಗಲೇ ಪರೀಕ್ಷೆಯಾಗಿ ಹೋಗುವದಿದೆ; ನಾವೇಕೆ ಅಡ್ಡವಾಗಬೇಕು. ಎಂದು ಹೇಳಲು ಎಲ್ಲರೂ ಸುಮ್ಮನೆ ದಾರಿಯಬಿಟ್ಟರು. ಆಗ ಅರ್ಜುನನು ಗಾಂಭೀರ್ಯದಿಂದ ಧನುಷ್ಯದ ಬಳಿಗೆ ಹೋಗಿ ಅದರ ಹೆದೆಯೇರಿಸಿ ಬಾಣವ ಹೂಡಿ ನೋಡು

ನೋಡುವಷ್ಟರಲ್ಲಿ ಗುರಿಯನ್ನು ಹೊಡೆದು ಬಿಟ್ಟನು. ಸ್ವಯಂವರಮಂಟಪದ ಲ್ಲೆಲ್ಲ ಕೋಲಾಹಲವೆದ್ದಿತು. ಬ್ರಾಹ್ಮಣರ ಆನಂದಕ್ಕೆ ಎಣೆಯಿಲ್ಲದಂತಾಯಿ ತು. ದ್ರೋಣಾಚಾರ್ಯರು ಗುರಿಹೊಡೆದವನು ಮಧ್ಯಮ ಪಾಂಡವನಾದ ಅ ರ್ಜುನನೆಂದು ಗುರುತಹಿಡಿದರು.

ದ್ರೌಪದಿಯ ವಿವಾಹವಾದ ಬಳಿಕ ಪಾಂಡವರೆಂಬದು ಎಲ್ಲರಿಗೂ ತಿಳಿಯಿ ತು. ಭೀಷ್ಮದ್ರೋಣರು ಮೊದಲಾದ ಕುರುಕುಲಾಭಿಮಾನಿಗಳೆಲ್ಲರೂ ಅವರನ್ನು ಹಸ್ತಿನಾಪುರಕ್ಕೆ ಕರೆದೊಯ್ದರು. ಪಾಂಡವರು ಅಲ್ಲಿ ಕೆಲವು ದಿವಸ ಇರುವಷ್ಟರ ಲ್ಲಿ ಕೌರವರ ದ್ವೇಷಾಗ್ನಿಯು ಮತ್ತೆ ಹೆಚ್ಚುತ್ತ ನಡೆಯಿತು. ಈಗ ಭೀಷ್ಮಾಚಾ ರ್ಯರು ಅವರೊಳಗಿನ ಪರಸ್ಪರ ವೈಮನಸ್ಯವು ಕಡಿಮೆಯಾಗುವ ಹೊಸದೊಂದು ಉಪಾಯವನ್ನು ಮಾಡಿದರು.

ಹಸ್ತಿನಾಪುರಕ್ಕೆ ಸ್ವಲ್ಪ ದೂರದಲ್ಲಿ ಪಾಂಡವರಿಗಾಗಿ ಇಂದ್ರಪ್ರಸ್ಥವೆಂಬ ಹೊಸರಾಜಧಾನಿಯನ್ನು ಸ್ಥಾಪಿಸಿ ಭೀಷ್ಮಾಚಾರ್ಯರು ಕೌರವರಿಗೂ ಪಾಂಡವರಿ ಗೂ ಸಮವಾಗಿ ರಾಜ್ಯವನ್ನು ವಿಭಾಗಿಸಿ ಕೊಟ್ಟು ಪಾಂಡವರನ್ನು ಆ ಹೊಸ ರಾಜ ಧಾನಿಗೆ ಕಳುಹಿದರು.

ಸ್ವಲ್ಪ ದಿವಸಗಳಲ್ಲಿ ಇಂದ್ರಪ್ರಸ್ಥವು ಇಂದ್ರಪುರದಂತೆ ಸಮೃದ್ಧಿಯನ್ನು ಹೊಂದಿತು. ಯುಧಿಷ್ಠಿರನು ಇಂದ್ರ ಪ್ರಸ್ಥದಲ್ಲಿ ರಾಜಸೂಯವೆಂಬ ಯಜ್ಞವನ್ನು ಆರಂಭಿಸಿದನು. ಎಲ್ಲ ದೇಶಗಳ ರಾಜರನ್ನೂ ಕರೆಯಿಸಿದನು. ಈ ಯಜ್ಞಕ್ಕೆ ಧರ್ಮರಾಜನು ದುರ್ಯೋಧನನನ್ನೂ ಕರೆಯಿಸಿದ್ದನು. ಅಲ್ಲಿ ಆತನು ಪಾಂಡವ ರ ಅಪಾರವಾದ ಐಶ್ವರ್ಯವನ್ನು ನೋಡಿ, ಮತ್ತು ಸ್ಫಟಿಕ ಶಿಲೆಯ ನೆಲಗಟ್ಟಿನಲ್ಲಿ ನೀರೆಂದು ಭ್ರಾಂತಿಬಟ್ಟು ಬಿದ್ದು ಅಪಮಾನಹೊಂದಿ ಬಹಳ ಸಂತಪ್ತನಾದನು. ಅದರಿಂದ ಆತನು ಮರಳಿ ಹಸ್ತಿನಾಪುರಕ್ಕೆ ಬಂದೊಡನೆ ಆ ಅಪಮಾನದ ಮು ಯ್ಯತೀರಿಸಿಕೊಳ್ಳಬೇಕೆಂದು ಆಲೋಚಿಸಿ ತನ್ನ ಸೋದರದ ಮಾವನಾದ ಶಕುನಿ ಯ ಆಪ್ತಾಲೋಚನೆಯಿಂದ ಧರ್ಮರಾಜನೊಡನೆ ಜೂಜಿನ ಆಟವನ್ನು ಹೂಡಿ ಅದರಲ್ಲಿ ಆತನನ್ನು ಸೋಲಿಸಿ ಸಂಕಟಕ್ಕೀಡು ಮಾಡಬೇಕೆಂದು ಬಗೆದು ಧರ್ಮರಾ ಜನನ್ನು ಜೂಜಿನಾಟದ ಸಲುವಾಗಿ ಕರೆಯಿಸಿದನು.

ಯುಧಿಷ್ಠಿರಮಹಾರಾಜನು ಈ ಕಪಟದ ಜೂಜಿನಾಟದಲ್ಲಿ ಸರ್ವಸ್ವವ ನ್ನೂ ಸೋತನು. ಆಟದ ಪಣದಮೇರೆಗೆ ಹನ್ನೆರಡು ವರ್ಷ ವನವಾಸವನ್ನೂ ಒಂದು ವರ್ಷ ಅಜ್ಞಾತವಾಸವನ್ನೂ ಅನುಭೋಗಿಸುವದಕ್ಕೆ ತಮ್ಮಂದಿರೊಡನೆ

ಹೊರಟನು. ಇಂದ್ರಪ್ರಸ್ಥ ರಾಜ್ಯದ ಪ್ರಜೆಗಳೆಲ್ಲರೂ ಗೋಳಿಟ್ಟರು.

ಪಾಂಡವರು ಹಲವು ಕಷ್ಟಗಳನ್ನನುಭವಿಸುತ್ತ ವನದಿಂದ ವನಕ್ಕೆ ಸಂಚರಿಸತೊಡಗಿದರು. ಭೀಷ್ಮಾಚಾರ್ಯರು ಚಿಂತೆಗೊಳಗಾದರು. ಪಾಂಡವರು ವನವಾಸದ ಹನ್ನೆರಡು ವರ್ಷಗಳನ್ನು ಹೇಗೋ ಕಳೆದರು. ಇನ್ನು ಅಜ್ಞಾತವಾಸದ ಒಂದು ವರ್ಷದ ಅವಧಿಯು ಉಳಿಯಿತು. ಆಗ ಪಾಂಡವರು ಗುಪ್ತ ವೇಷದಿಂದ ಎಲ್ಲಿಯಾದರೂ ಇರಬೇಕೆಂದು ಆಲೋಚಿಸಿ ವಿರಾಟರಾಜನ ರಾಜ್ಯದಲ್ಲಿ ಸೇರಿ ಅಲ್ಲಿ ಒಂದು ದೊಡ್ಡ ಬನ್ನಿಯಮರದಲ್ಲಿ ತಮ್ಮ ಶಸ್ತ್ರಾಸ್ತ್ರಗಳನ್ನು ಇಟ್ಟು ವೇಷಾಂತರದಿಂದ ಆರಾಜನ ರಾಜಧಾನಿಯನ್ನು ಹೊಕ್ಕು ಒಬ್ಬೊಬ್ಬರೇ ಹೋಗಿ ಅರಮನೆಯಲ್ಲಿ ಆಶ್ರಯವನ್ನು ಹೊಂದಿದರು. ಧರ್ಮರಾಜನು ಕಂಕ ಎಂಬ ಹೆಸರನ್ನಿಟ್ಟುಕೊಂಡು ಬ್ರಾಹ್ಮಣ ವೇಷದಿಂದ ವಿರಾಟನ ಸಭಾಸದನಾದನು. ಭೀಮನು ಬಲ್ಲವನೆಂಬ ಹೆಸರಿನಿಂದ ಅಡಿಗೆಯವನಾದನು. ಅರ್ಜುನನು ಸ್ತ್ರೀವೇಷವನ್ನು ಧರಿಸಿ ಬೃಹನ್ನಳೆಯೆಂಬ ಹೆಸರಿನಿಂದ ರಾಜಪುತ್ರಿಗೆ ಗೀತನೃತ್ಯಗಳನ್ನು ಕಲಿಸುವವನಾದನು. ನಕುಲನು ಗ್ರಂಥಿಕನೆಂಬ ಹೆಸರಿನಿಂದ ಅಶ್ವಶಾಲೆಯ ಅಧಿಕಾರಿಯಾದನು. ಸಹದೇವನು ಅರಿಷ್ಟನೇಮಿಯೆಂಬ ಹೆಸರಿನಿಂದ ಗೋಶಾಲೆಯ ಅಧ್ಯಕ್ಷನಾದನು. ದ್ರೌಪದಿಯು ಸೈರಂಧ್ರಿಯೆಂಬ ಹೆಸರಿನಿಂದ ವಿರಾಟನ ಅರಸಿಯಾದ ಸುದೇಷ್ಣೆಯ ಪರಿಚಾರಿಕೆಯಾದಳು.

ಈ ಮೇರೆಗೆ ಕೆಲವು ದಿವಸಗಳು ಸಾಗುತ್ತಿರಲು ಅಜ್ಞಾತವಾಸದ ಅವಧಿಯು ಮುಗಿಯುತ್ತ ಬಂದಿತು. ಈ ಸಮಯದಲ್ಲಿ ದುರ್ಯೋಧನನು ವಿರಾಟನ ಮುಖ್ಯಸೇನಾಧಿಪತಿಯಾದ ಕೀಚಕನು ಕೊಲ್ಲಲ್ಪಟ್ಟಿರುವನೆಂಬ ವರ್ತಮಾನವನ್ನು ಕೇಳಿದನು. ಈಗ ವಿರಾಟನ ಗೋಧನವನ್ನು ಅಪಹರಿಸುವದು ಸುಸಾಧ್ಯವೆಂದು ಬಗೆದು ಭೀಷ್ಮಕರ್ಣಾದಿ ವೀರರನ್ನೊಡಗೊಂಡು ಆತನು ವಿರಾಟನ ರಾಜಧಾನಿಯ ಮೇಲೆ ದಂಡೆತ್ತಿ ಬಂದನು. ಕೌರವಸೇನೆಯು ಬಂದದ್ದನ್ನು ಕೇಳಿ ವಿರಾಟಪುತ್ರನಾದ ಉತ್ತರನು ಗೋಧನದ ರಕ್ಷಣೆಗಾಗಿ ಸೈನ್ಯದೊಡನೆ ಹೊರಟನು. ಕೌರವಸೇನೆಯೊಳಗಿನ ವೀರರ ಹೆಸರುಗಳನ್ನು ಕೇಳಿ ಉತ್ತರನ ಸಾರಥಿಯಾಗುವದಕ್ಕೆ ಯಾರೂ ಒಪ್ಪಲಿಲ್ಲ. ಆಗ ಬೃಹನ್ನಳೆಯ ವೇಷದಿಂದ ಇದ್ದ ಅರ್ಜುನನು ಸಾರಥಿಯಾಗಲೊಪ್ಪಿ ಉತ್ತರನನ್ನು ಕರೆದುಕೊಂಡು ಯುದ್ಧಕ್ಕೆ ನಡೆದನು. ಸ್ವಲ್ಪ ಮುಂದೆ ಹೋಗುವಷ್ಟರಲ್ಲಿ ಉತ್ತರನು ಅಪಾರವಾದ ಕೌರವಸೇನಾಸಾಗರವನ್ನೂ, ವೀರಪುರುಷರ ರಾಹುಟಿಗರನ್ನೂ ನೋಡಿ ಅಂಜಿ ಹಿಂದಿರುಗಿ ಓಡಿಹೋಗಬೇಕೆಂದು ಯತ್ನಿಸಿದನು. ಆದರೆ ಅರ್ಜುನನು –ನಾನು ಯುದ್ಧ ಮಾಡುವೆನು, ನೀನು ಅಂಜಬೇಡ ಎಂದು ಹೇಳಿ ಆತನನ್ನು ಬಲಾತ್ಕಾರದಿಂದ ಹಿಡಿದು ತಂದು ಶಮೀವೃಕ್ಷದೊ

ರಗಿಟ್ಟ ಗಾಂಡೀವವನ್ನು ತೆಗೆದುಕೊಂಡು ಯುದ್ಧಕ್ಕೆ ನಿಂತನು. ಆ ಯುದ್ಧದಲ್ಲಿ ಅರ್ಜುನನು ತೋರಿಸಿದ ಅಪೂರ್ವವಾದ ಅಸ್ತ್ರಕೌಶಲ್ಯವನ್ನು ನೋಡಿ ಈತನು ಅರ್ಜುನನೆಂದು ಕೌರವಸೈನಿಕರೆಲ್ಲ ತಿಳಿದುಕೊಂಡರು. ಭೀಷ್ಮಾಚಾರ್ಯರು ಅರ್ಜುನನ ಚಾತುರ್ಯವನ್ನು ಕಂಡು ತಲೆದೂಗಿದರು.

ದುರ್ಯೋಧನನು ಅರ್ಜುನನ ಗುರುತ ಹಿಡಿದೆನೆಂದು ಒಮ್ಮೆಲೆ ಹರ್ಷ ಆಶ್ಚರ್ಯಗಳುಳ್ಳವನಾದನು. ಅಜ್ಞಾತವಾಸದಲ್ಲಿರುವಾಗ ಪಾಂಡವರನ್ನು ಗುರುತಿಸಿದರೆ ಮತ್ತೆ ಅವರು ಹನ್ನೆರಡು ವರ್ಷ ವನವಾಸದಲ್ಲಿರಬೇಕೆಂದು ಗೊತ್ತಾಗಿತ್ತು. ಈ ಕಾರಣದಿಂದಲೇ ಅರ್ಜುನನ ಗುರುತು ಸಿಕ್ಕಿದೊಡನೆ ಹರ್ಷಿತನಾದನು. ಮತ್ತು ಪಾಂಡವರು ವನವಾಸ ಅಜ್ಞಾತವಾಸಗಳಲ್ಲಿ ಬೇಕಾದಷ್ಟು ಕಷ್ಟ ಒದಗಿದರೂ ಬದುಕಿರುವದನ್ನು ನೋಡಿ ಆಶ್ಚರ್ಯಬಟ್ಟನು. ದುರ್ಯೋಧನನ ಹರ್ಷದ ಕಾರಣವನ್ನು ತಿಳಿದು ಭೀಷ್ಮಾಚಾರ್ಯರು ದುರ್ಯೋಧನಾ, ನಿನಗೆ ಭ್ರಾಂತಿಯುಂಟಾಗಿದೆ; ಪಾಂಡವರ ಅಜ್ಞಾತವಾಸದ ಅವಧಿಯು ಮುಗಿದು ಐದು ತಿಂಗಳು ಹೆಚ್ಚಿಗೆ ಆಗಿವೆ. ಅವಧಿಯು ಮುಗಿದ ಹೊರತು ಪಾಂಡವರು ಈ ಯುದ್ಧದಲ್ಲಿ ಹೊರಬೀಳುತ್ತಿರಲಿಲ್ಲ ಎಂದು ಹೇಳಿದರು. ಇಷ್ಟರಲ್ಲಿ ಅರ್ಜುನನು ಕೌರವ ಸೇನೆಯನ್ನೆಲ್ಲ ಹೊಡೆದೋಡಿಸಿ ವಿರಾಟರಾಜನ ಗೋಧನವನ್ನು ಕಾಪಾಡಿದನು. ಕೌರವರು ನಿರಾಶರಾಗಿ ಹಸ್ತಿನಾಪುರಕ್ಕೆ ಮರಳಿ ಹೋದರು.

ಉತ್ತರನು ಯುದ್ಧವನ್ನು ಮುಗಿಸಿ ರಣಭೂಮಿಯಿಂದ ಬಂದಬಳಿಕ ಗೋಧನವನ್ನು ಕಾಪಾಡಿದ ಬಗೆಯನ್ನು ಹೇಳಿ, ತಂದೆಗೆ ಅರ್ಜುನನ ಪರಿಚಯ ಮಾಡಿಕೊಟ್ಟನು. ವಿರಾಟನು ಪಾಂಡವರೆಲ್ಲರೂ ತನ್ನ ಆಶ್ರಯದಲ್ಲಿದ್ದರೆಂಬದನ್ನು ತಿಳಿದು ಆಶ್ಚರ್ಯಬಟ್ಟನು; ಮತ್ತು ಅವರನ್ನು ಯೋಗ್ಯವಾದ ಮನ್ನಣೆಯಿಂದ ನಡೆಸಿಕೊಳ್ಳಲಿಲ್ಲವೆಂದು ಅಂಜಿದನು. ಆಗ ಆತನು ಧರ್ಮರಾಜನ ಬಳಿಗೆ ಹೋಗಿ ತನ್ನ ತಪ್ಪುಗಳನ್ನೆಲ್ಲ ಕ್ಷಮಿಸಬೇಕೆಂದು ಬೇಡಿಕೊಂಡನು. ಮತ್ತು ತನ್ನ ಮಗಳಾದ ಉತ್ತರೆಯನ್ನು ಅರ್ಜುನನಿಗೆ ಮದುವೆ ಮಾಡಿಕೊಳ್ಳಬೇಕೆಂದು ಕೇಳಿಕೊಂಡನು. ಆದರೆ ಅರ್ಜುನನು ಉತ್ತರೆಗೆ ಗುರುಸ್ಥಾನದಲ್ಲಿದ್ದದರಿಂದ ಮಗಳಂತೆ ಇರುವ ಆಕೆಯನ್ನು ಮದುವೆಯಾಗಲೊಪ್ಪಲಿಲ್ಲ. ಅರ್ಜುನನ ಮಗನಾದ ಅಭಿಮನ್ಯುವಿಗೆ ಉತ್ತರೆಯನ್ನು ಕೊಡಬೇಕೆಂದು ನಿಶ್ಚಯವಾಯಿತು. ಯುಧಿಷ್ಠಿರನು ಶ್ರೀಕೃಷ್ಣನ ಸಮ್ಮತಿಯನ್ನು ಪಡೆದು ಮದುವೆಯನ್ನು ಮಾಡಿದನು. ಇದರಿಂದ ವಿರಾಟನಿಗೂ ಪಾಂಡವರಿಗೂ ಆಪ್ತತ್ವವುಂಟಾಯಿತು.

ಪಾಂಡವರು ಮುಂದೆ ಕೆಲವು ದಿವಸ ವಿರಾಟನಗರದಲ್ಲಿಯೇ ಇದ್ದುಕೊಂಡು ತಮಗೆ ಮರಳಿ ರಾಜ್ಯವು ದೊರೆಯುವ ಉಪಾಯವನ್ನು ತಮ್ಮ ತಮ್ಮ ಆಪ್ತ ಜನ

ರೊಡನೆ ಆಲೋಚಿಸತೊಡಗಿದರು. ದುರ್ಯೋಧನನು ತಮ್ಮ ರಾಜ್ಯವನ್ನು ಸಹಜವಾಗಿ ತಿರುಗಿ ಕೊಡುವದಿಲ್ಲವೆಂಬದನ್ನು ಪಾಂಡವರು ಮೊದಲೇ ತಿಳಿದಿದ್ದರು. ಧರ್ಮರಾಜನು ತಮ್ಮತಮ್ಮೊಳಗೆ ಯುದ್ಧದ ಪ್ರಸಂಗವು ಬರಬಾರದೆಂದು ದುರ್ಯೋಧನನೊಡನೆ ಒಪ್ಪಂದವಮಾಡುವ ಉದ್ದೇಶದಿಂದ ದ್ರುಪದರಾಜನ ಪುರೋಹಿತನನ್ನು ಹಸ್ತಿನಾಪುರಕ್ಕೆ ಕಳುಹಬೇಕೆಂದು ನಿಶ್ಚಯುವಮಾಡಿದನು.

ಪುರೋಹಿತನು ಹಸ್ತಿನಾಪುರಕ್ಕೆ ಬಂದನು. ದುರ್ಯೋಧನನು ಆತನಿಗೆ ತಕ್ಕ ಮರ್ಯಾದೆಯನ್ನು ಮಾಡಿದನು. ಆ ಪುರೋಹಿತನು ರಾಜಸಭೆಯಲ್ಲಿ ಧೃತರಾಷ್ಟ್ರನೆದುರಿಗೆ ದುರ್ಯೋಧನನ ಸ್ವಭಾವದೋಷವನ್ನೂ ಪಾಂಡವರ ಸ್ವಭಾವದ ಗುಣಗಳನ್ನೂ ವರ್ಣಿಸಿ ಹೇಳಿದನು. ಮತ್ತು ಪಾಂಡವರ ಅರ್ಧ ರಾಜ್ಯವನ್ನು ಮರಳಿ ಕೊಡುವದಕ್ಕೆ ಹೇಳಬೇಕೆಂಬದೇ ತಾನು ಬಂದ ಉದ್ದೇಶವೆಂದು ಹೇಳಿದನು. ಪುರೋಹಿತನ ನುಡಿಗಳನ್ನು ಕೇಳಿ ದುರ್ಯೋಧನನು ಸಂತಪ್ತನಾದನು.

ಭೀಷ್ಮಾಚಾರ್ಯರು ಆ ಬ್ರಾಹ್ಮಣನನ್ನು ಕುರಿತು—ಬ್ರಾಹ್ಮಣವರ್ಯರೇ, ತಾವು ಹೇಳುವದು ನಿಜವು. ಪಾಂಡವರು ಅರ್ಧ ರಾಜ್ಯದ ಅಧಿಕಾರಿಗಳು ಅಹುದು. ಅವರು ಒಮ್ಮೆಲಿ ಯುದ್ಧವನ್ನು ಹೂಡದೆ ನಿಮ್ಮಂಥವರನ್ನು ಒಪ್ಪಂದಕ್ಕೆ ಕಳುಹಿರುವದು ಬಹಳ ಶ್ಲಾಘ್ಯವಾಗಿದೆ. ಈಗ ದುರ್ಯೋಧನನು ಅರ್ಧ ರಾಜ್ಯವನ್ನು ಬಿಟ್ಟುಕೊಡುವದು ಯೋಗ್ಯವಾಗಿದೆ; ಎಂದು ಹೇಳಿ ರಾಜಸಭೆಯಲ್ಲಿ ತಮ್ಮ ಅಭಿಪ್ರಾಯುವನ್ನು ವ್ಯಕ್ತವಮಾಡಿದರು.

ಭೀಷ್ಮಾಚಾರ್ಯರ ಈ ಆಪ್ತಾಲೋಚನೆಯನ್ನು ದುರ್ಯೋಧನನು ಮನ್ನಿಸಲಿಲ್ಲ. ಆತನು ಒಪ್ಪಂದಕ್ಕೆ ಏನಾದರೂ ಒಪ್ಪಲಿಲ್ಲ. ಈ ಸಮಯದಲ್ಲಿ ಭೀಷ್ಮಾಚಾರ್ಯರು ದುರ್ಯೋಧನನಿಗೆ ಬಹಳ ಹಿತೋಪದೇಶವನ್ನು ಮಾಡಿದರು. ಆದರೆ ಅದಕ್ಕೆ ಆತನು ಕಿವಿಗೊಡಲಿಲ್ಲ. ಧೃತರಾಷ್ಟ್ರನು ದುರ್ಯೋಧನನ ವಿರುದ್ಧವಾಗಿ ಮಾತಾಡುವ ಸಾಹಸವನ್ನು ಮಾಡಲಿಲ್ಲ. ಕೊನೆಗೆ ಪಾಂಡವರು ಐದು ಗ್ರಾಮುಗಳನ್ನು ಮಾತ್ರ ಕೊಟ್ಟರೆ ಅಷ್ಟರಿಂದಲೇ ಒಡಂಬಡುವೆವೆಂದು ಹೇಳಿ ಕಳುಹಿದರು. ಈ ಬೇಡಿಕೆಯನ್ನೂ ಕೂಡ ದುರ್ಯೋಧನನು ಮನ್ನಿಸಲಿಲ್ಲ. ಯುದ್ಧದ ಹೊರತು ಪಾಂಡವರಿಗೆ ಉಪಾಯುವೇ ಇಲ್ಲದಂತಾಯಿತು. ಹೀಗಾಗಿ ಕೊನೆಗೆ ಭಯಂಕರವಾದ ಕುರುಕ್ಷೇತ್ರದ ಮಹಾಯುದ್ಧವು ಪ್ರಾರಂಭವಾಯಿತು.

ಇತ್ತ ದುರ್ಯೋಧನನು ಯುದ್ಧದ ಸಿದ್ಧತೆಯನ್ನು ದಕ್ಷತೆಯಿಂದ ಮಾಡ

ತೊಡಗಿದನು. ಅಸಹಾಯರಾದ ಪಾಂಡವರು ಶ್ರೀ ಕೃಷ್ಣನ ಮರೆಹೊಕ್ಕರು. ಆಗ ಶ್ರೀ ಕೃಷ್ಣನು ಪಾಂಡವರ ರಾಯಭಾರಿಯಾಗಿ ಹಸ್ತಿನಾಪುರಕ್ಕೆ ಪ್ರಯಾಣ ಮಾಡಿದನು. ಶ್ರೀಕೃಷ್ಣನು ತಾನೇ ಬಂದಿರುವನೆಂಬ ಸುದ್ದಿಯನ್ನು ಭೀಷ್ಮಾಚಾರ್ಯರು ಕೇಳಿದರು. ಆಗ ಅವರು ಧೃತರಾಷ್ಟ್ರನನ್ನು ಕುರಿತು—ಈಗ ಶ್ರೀ ಕೃಷ್ಣನೇ ಬಂದಿರುವನು, ಅವನಿಗೆ ತಕ್ಕ ಮನ್ನಣೆಯನ್ನು ಮಾಡುವದು ನಮ್ಮ ಕರ್ತವ್ಯವಾಗಿದೆ; ಆತನು ನಿಷ್ಪಕ್ಷಪಾತಿಯು. ಇದಲ್ಲದೆ ತಂದೆಯಿಲ್ಲದ ಪಾಂಡವರಿಗೆ ನೀನು ತಂದೆಯ ಸ್ಥಾನದಲ್ಲಿರುವೆ. ಆದದರಿಂದ ಶ್ರೀಕೃಷ್ಣನು ಹೇಳುವದನ್ನು ಕೇಳಿ ಪಾಂಡವರನ್ನು ಕಾಪಾಡಿ ಕೀರ್ತಿಯನ್ನು ಪಡೆ ಎಂದು ಹೇಳಿದರು. ಧೃತರಾಷ್ಟ್ರನು ಈ ಮಾತಿಗೆ ಕಿವಿಗೊಡಲಿಲ್ಲ. ಮತ್ತು ಶ್ರೀಕೃಷ್ಣನು ಹಸ್ತಿನಾವತಿಗೆ ಬಂದೊಡನೆ ಆತನನ್ನು ಸೆರೆಯಲ್ಲಿಡಿರೆಂದು ಕೌರವರಿಗೆ ಸಲಹೆಯನ್ನು ಹೇಳಿದನು. ಭೀಷ್ಮಾಚಾರ್ಯರು ಇದನ್ನು ಕೇಳಿ ಬಹಳ ಕೋಪಗೊಂಡರು. ಅವರು ಸಿಟ್ಟಾದದರಿಂದಲೇ ಆ ವಿಚಾರವು ಅಷ್ಟಕ್ಕೇ ನಿಂತಿತು. ಶ್ರೀಕೃಷ್ಣನು ಹಸ್ತಿನಾವತಿಗೆ ಬಂದನು ಭೀಷ್ಮಾದಿಗಳು ಆತನಿಗೆ ತಕ್ಕ ಸತ್ಕಾರವನ್ನುಮಾಡಿದರು. ಶ್ರೀಕೃಷ್ಣನು ಓಲಗಕ್ಕೆ ಬಂದು ಒಪ್ಪಂದದ ವಿಷಯವಾಗಿ ಮಾತನಾಡತೊಡಗಿದನು. ಭೀಷ್ಮಾಚಾರ್ಯರು ಶ್ರೀಕೃಷ್ಣನ ಮಾತನ್ನೇ ಪುಷ್ಟೀಕರಿಸಿ ದುರ್ಯೋಧನನನ್ನು ಕುರಿತು ಹಲವು ಬಗೆಯಿಂದ ಉಪದೇಶದ ಮಾತುಗಳನ್ನು ಈ ಮೇರೆಗೆ ಹೇಳಿದರು:-"ವತ್ಸಾ ದುರ್ಯೋಧನಾ, ಯುಕ್ತಾಯುಕ್ತ ವಿಚಾರವುಳ್ಳ ಶ್ರೀಕೃಷ್ಣನು ಹೇಳುವದನ್ನು ಕೇಳು, ಆತನು ಅಲ್ಲದ ಮಾತುಗಳನ್ನು ಹೇಳುವವನಲ್ಲ. ನೀನು ಯಾವಾಗಲೂ ಕರ್ಣನ ಉಪದೇಶಕ್ಕೆ ಕಿವಿಗೊಟ್ಟು ನಮ್ಮಂಥವರ ಮಾತಿಗೆ ಲಕ್ಷಗೊಡುವದಿಲ್ಲ. ಇದು ಸರಿಯಲ್ಲ; ಕುರುಕುಲರಾಜ್ಯಲಕ್ಷ್ಮಿಯು ನಿನ್ನನ್ನು ತೊರೆದು ಹೋಗುವಂಥ ಸಮಯವನ್ನು ನೀನಾಗಿ ತಂದುಕೊಳ್ಳಬೇಡ. ಶ್ರೀಕೃಷ್ಣನ ಮಾತಿಗೆ ಮಾನಕೊಡು. ಯುಧಿಷ್ಠಿರನು ನಿನ್ನ ಎಲ್ಲ ಅಪರಾಧಗಳನ್ನು ಮರೆಯುವನು. ನಿನ್ನ ತಂದೆ ಧೃತರಾಷ್ಟ್ರನು ಹುಟ್ಟುಗುರುಡನಾದದರಿಂದ ಆತನಿಗೆ ಸಿಂಹಾಸನವು ದೊರೆಯಲಿಲ್ಲ. ಆಗ ಪಾಂಡುರಾಜನು ರಾಜ್ಯಾಧಿಕಾರಿಯಾದನು. ಆದದರಿಂದ ಈಗ ಅವನ ಮಕ್ಕಳಾದ ಪಾಂಡವರು ನ್ಯಾಯದಿಂದ ರಾಜ್ಯಾಧಿಕಾರಿಗಳಾಗಿರುವರು. ಅವರೊಡನೆ ನೀನು ಒಪ್ಪಂದಮಾಡಿಕೊಂಡು ಪ್ರೀತಿಯಿಂದ ಇರುವದು ಯೋಗ್ಯವಾಗಿದೆ. ಇದರಿಂದ ನಿಮ್ಮಿಬ್ಬರಿಗೂ ಒಳಿತಾಗುವದು. ರಾಜ್ಯಕ್ಕೂ ಕ್ಷೇಮವಾಗುವದು."

ದ್ರೋಣಾಚಾರ್ಯರೂ ವಿದುರನೂ ಭೀಷ್ಮರ ಉಪದೇಶವನ್ನೇ ಸಮರ್ಥನ ಮಾಡಿ ಉಪದೇಶಿಸಿದರು. ಪಾಪಿಯಾದ ದುರ್ಯೋಧನನಿಗೆ ಯಾರ ಉಪದೇಶವೂ ರುಚಿಸಲಿಲ್ಲ. ಆತನು ಸ್ವಲ್ಪವೂ ಹಿಂದೆಮುಂದೆ ನೋಡದೆ— ಪಾಂಡವರೊಡನೆ

ಒಪ್ಪಂದವನ್ನು ಎಂದೂ ಮಾಡಿಕೊಳ್ಳಲಾರೆನು; ಅವರಿಗೆ ಸೂಜಿಯ ಮೊನೆಗೆ ಹತ್ತುವಷ್ಟು ಭೂಮಿಯನ್ನು ಕೂಡ ಕೊಡಲಾರೆನು." ಎಂದು ಉತ್ತರ ಕೊಟ್ಟನು.

ಶ್ರೀಕೃಷ್ಣನು ನಿರುಪಾಯನಾಗಿ ಪಾಂಡವರ ಪಾಳಯಕ್ಕೆ ಹೊಂಟು ಹೋದನು. ಭೀಷ್ಮಾಚಾರ್ಯರು ಭವಿಷ್ಯತ್ಕಾಲದ ಅನರ್ಥವನ್ನು ಆಲೋಚಿಸಿ ಬಹಳ ಮರುಗಿದರು. ದುರ್ಯೋಧನನು ಯುದ್ಧದ ಸಿದ್ಧತೆಯನ್ನು ಬಹಳ ತ್ವರೆಯಿಂದ ನಡೆಸಿದನು.

ಇತ್ತ ಶ್ರೀಕೃಷ್ಣನು ಪಾಂಡವರ ಪಾಳಯಕ್ಕೆ ಬಂದಬಳಿಕ ಪಾಂಡವರನ್ನು ಕುರಿತು— ನಾನೇ ಹಸ್ತಿನಾಪತಿಗೆ ಹೋಗಿ ಹೇಳಿದರೂ ದುರ್ಯೋಧನನು ಒಪ್ಪಲಿಲ್ಲವಾದದರಿಂದ ನೀವು ಯುದ್ಧವನ್ನು ಮಾಡಿರಿ ಎಂದು ಹೇಳಿದನು. ರಾಜ್ಯಕ್ಕಾಗಿ ತಮ್ಮ ಬಂಧುಗಳೊಡನೆ ಯುದ್ಧಮಾಡುವದನ್ನು ಮೊದಮೊದಲು ಪಾಂಡವರು ಒಪ್ಪಲಿಲ್ಲ. ಆದರೆ ಶ್ರೀಕೃಷ್ಣನು ಈ ಸಮಯದಲ್ಲಿ ಯುದ್ಧಮಾಡುವದೇ ಧರ್ಮವೆಂದು ಸಿದ್ಧಮಾಡಿ ಹೇಳಿದನು. ಬಳಿಕ ಪಾಂಡವರೂ ಯುದ್ಧದ ಸಿದ್ಧತೆಯನ್ನು ಮಾಡತೊಡಗಿದರು.

ಕುರುಕ್ಷೇತ್ರದ ರಣಾಂಗಣದಲ್ಲಿ ಎರಡೂ ಕಡೆಯ ಅಪಾರವಾದ ಸೇನೆಗಳು ಸೇರಿದವು. ದುರ್ಯೋಧನನು ಈ ಮಹಾಯುದ್ಧದಲ್ಲಿ ಮೊದಲು ಭೀಷ್ಮಾಚಾರ್ಯರಿಗೇ ಸೇನಾಪತಿಪದವನ್ನು ಕೊಟ್ಟನು. ಭೀಷ್ಮಾಚಾರ್ಯರು ಕೌರವರ ಆಶ್ರಯದಲ್ಲಿದ್ದದರಿಂದಲೇ ಆ ಪದವನ್ನು ನಿರ್ವಾಹವಿಲ್ಲದೆ ಸ್ವೀಕರಿಸಬೇಕಾಯಿತು. ಆದರೂ ಅವರ ಮನಸ್ಸು ಪಾಂಡವರ ಸಲುವಾಗಿ ಅಳುಕುತಿತ್ತು. ಅವರು ದುರ್ಯೋಧನನನ್ನು ಕುರಿತು— ದುರ್ಯೋಧನಾ, ನಾನು ನಿನ್ನ ಕಡೆಗೆ ಯುದ್ಧಮಾಡುವೆನಾದರೂ ನಾನು ಯಾವತರದ ಅನ್ಯಾಯದ ಯುದ್ಧವನ್ನೂ ಕೈಕೊಳ್ಳಲಾರೆನು. ನನಗೆ ನೀವೂ ಪಾಂಡವರೂ ಇಬ್ಬರೂ ಸಮಾನರು. ನಾನು ಇಬ್ಬರಿಗೂ ಒಳಿತಾಗಬೇಕೆಂದು ಬಯಸುವವನು. ನಿನ್ನ ಉಪ್ಪು ಉಂಡದರಿಂದ ಮಾತ್ರ ನಿಮ್ಮ ಕಡೆಯವನಾಗಿ ಯುದ್ಧಮಾಡುವೆನು ಎಂದು ಹೇಳಿದರು.

ಪಿತಾಮಹರಾದ ಭೀಷ್ಮರು ಸೇನಾಪತಿಯಾಗಿರುವದನ್ನು ಕೇಳಿ ಪಾಂಡವರು ರಾಜ್ಯದ ಆಶೆಯನ್ನು ತೊರೆದು ಈ ಲೋಕಕ್ಷಯಕರವಾದ ಯುದ್ಧವನ್ನು ಅಷ್ಟಕ್ಕೇ ನಿಲ್ಲಿಸಿಬಿಡಬೇಕೆಂದು ಮಾಡಿದರು. ಅರ್ಜುನನು ಶ್ರೀಕೃಷ್ಣನನ್ನು ಕುರಿತು— ಮಿತ್ರನೇ, ಈ ಯುದ್ಧದಲ್ಲಿ ಭೀಷ್ಮಾಚಾರ್ಯರು ಪ್ರತಿಪಕ್ಷಿಯ ಕಡೆಗೆ ಸೇನಾಪತಿಯಾಗಿ ಯುದ್ಧಕ್ಕೆ ನಿಂತಿರುವರು. ಬಾಲ್ಯದಲ್ಲಿ ನಮ್ಮೆಲ್ಲರನ್ನು ತೊಡೆಯ ಮೇಲೆ

ಇಟ್ಟುಕೊಂಡು ಆಡಿಸಿ ದೊಡ್ಡವರನ್ನಾಗಿ ಮಾಡಿದಂಥ ಆ ಪಿತಾಮಹರ ಮೇಲೆ ಶಸ್ತ್ರವನ್ನೆತ್ತುವದು ನ್ಯಾಯವೇ? ಮತ್ತು ನಾವು ಯಾರೊಡನೆ ಇದ್ದು ಸಂಸಾರದಲ್ಲಿ ಸುಖಾನುಭವ ಮಾಡಬೇಕಾಗಿರುವದೋ ಅಂಥವರೆಲ್ಲರೂ ಮಡಿದು ಹೋಗುವಂಥ ಈ ಯುದ್ಧವನ್ನು ಮಾಡಿ, ಬಳಿಕ ಬಳಗದವರನ್ನು ಕಳೆದುಕೊಂಡ ನಮಗೆ ಹಾಳು ರಾಜ್ಯವು ಸುಖವನ್ನು ಕೊಟ್ಟೀತೇ? ಆದದರಿಂದ ನಾನು ಯುದ್ಧವನ್ನು ಒಲ್ಲೆನು: ದುರ್ಯೋಧನನೇ ಎಲ್ಲಾ ರಾಜ್ಯವನ್ನು ಆಳಲಿ; ಎಂದು ದೈನ್ಯದಿಂದ ಮಾತಾಡಿದನು.

ಅರ್ಜುನನ ಸಾರಥಿತನವನ್ನು ಕೈಕೊಂಡ ಶ್ರೀ ಕೃಷ್ಣನು ಆತನ ಮನಸ್ಸಿನ ದುರ್ಬಲತನವನ್ನು ಕಂಡು ಬೆರಗಾಗಿ ಆತನನ್ನು ಕುರಿತು ಈ ಮೇರೆಗೆ ಉಪದೇಶ ಮಾಡಿದನು:—“ ಮಿತ್ರನೇ, ನಿನಗೆ ಇದೆಲ್ಲಿಯ ಮನೋದೌರ್ಬಲ್ಯವುಂಟಾಯಿತು? ಮುಂದೆ ಇಟ್ಟ ಕಾಲನ್ನು ಹಿಂದಿಡುವದು ಹೇಡಿತನವು. ಇದಲ್ಲದೆ ಈ ಯುದ್ಧವನ್ನು ನೀವಾಗಿ ಅನ್ಯಾಯದಿಂದ ಹೂಡಿಲ್ಲ. ನೀನು ಕ್ಷತ್ರಿಯ ವೀರನು; ಯುದ್ಧದಲ್ಲಿ ಎದುರಿಸಿದವರೊಡನೆ ಯುದ್ಧ ಮಾಡುವದು ನಿನ್ನ ಕರ್ತವ್ಯವಾಗಿದೆ. ಮನುಷ್ಯರು ತಮ್ಮ ತಮ್ಮ ಕರ್ತವ್ಯವನ್ನು ಮಾಡುವದಕ್ಕೋಸ್ಕರವೇ ಜನ್ಮವನ್ನೆತ್ತಿರುತ್ತಾರೆ. ಕರ್ತವ್ಯವಿಮುಖರಾಗುವದು ಪಾಪವು. ನೀನೂ ನಿನ್ನ ಕರ್ತವ್ಯವನ್ನು ಮಾಡು. ಸ್ವಧರ್ಮವು ಶ್ರೇಷ್ಠವಾದದ್ದು. ನೀನು ನಿನ್ನ ಕ್ಷತ್ರಿಯ ಧರ್ಮವನ್ನು ಪಾಲಿಸು. ಮನೋದೌರ್ಬಲ್ಯದಿಂದುಂಟಾದ ಮೋಹದಿಂದ ನೀನು ಹೀಗೆ ಮಾತಾಡುವೆ; ಮೋಹವನ್ನು ಬಿಟ್ಟು ಕಾರ್ಯವನ್ನು ಮಾಡು; ಯುದ್ಧದಲ್ಲಿ ಏನಾದರೇನು? ಕರ್ತವ್ಯವೆಂದು ತಿಳಿದು ಕರ್ಮವನ್ನು ಮಾಡುವದೇ ಮನುಷ್ಯನಿಗೆ ಭೂಷಣವು; ಕರ್ಮದ ಫಲವನ್ನು ನೋಡುವದು ಆತನ ಕೆಲಸವಲ್ಲ ”

ಶ್ರೀ ಕೃಷ್ಣನ ಉಪದೇಶವನ್ನು ಕೇಳಿ ಅರ್ಜುನನು ಮಿತ್ರನೇ, ನಿನ್ನ ಉಪದೇಶದಿಂದ ನನ್ನ ಮೋಹವೆಲ್ಲ ಅಳಿದು ಹೋಗಿದೆ. ನನ್ನ ಮೇಲೆ ಅನುಗ್ರಹ ಮಾಡಿದೆ. ಈಗ ನನ್ನ ಕರ್ತವ್ಯವನ್ನು ಮಾಡಲು ನಾನು ಸಿದ್ಧನಾಗಿರುವೆನು; ರಥವನ್ನೇರು, ಎಂದು ಹೇಳಿ ಉತ್ಸಾಹದಿಂದ ರಣರಂಗದಲ್ಲಿ ಮುಂದೆ ಸಾಗಲನುವಾದನು.

ಬಳಿಕ ಅರ್ಜುನನು ಕುರುಕುಲ ಪಿತಾಮಹರಾದ ಭೀಷ್ಮರ ಬಳಿಗೆ ಬಂದು ಕೈಜೋಡಿಸಿ- ಪೂಜ್ಯರೇ, ನಾವು ಈಗ ದೊಡ್ಡ ಸಂಕಟದಲ್ಲಿ ಸಿಲುಕಿರುವೆವು. ಈ ಭಯಂಕರವಾದ ಯುದ್ಧದ ಪರಿಣಾಮದ ಕಡೆಗೆ ದೃಷ್ಟಿಯನ್ನಿಟ್ಟರೆ ಮೈಮೇಲೆ ಮುಳ್ಳೇಳುವವು ನಾನು ಈಗ ತಮ್ಮ ಪಾದಗಳಿಗೆ ವಂದನೆಮಾಡಿ ಆಶೀರ್ವಾದವನ್ನು ಬೇಡುವೆನು. ಯುದ್ಧವು ಅಪರಿಹಾರ್ಯವಾಗಿದೆ; ಆದದರಿಂದ ನಿಮ್ಮ

ಡನೆ ಯುದ್ಧ ಮಾಡುವದಕ್ಕೆ ನೀವು ನಿರ್ಮಲ ಮನಸ್ಸಿನಿಂದ ಒಪ್ಪಿಗೆಯನ್ನು ಕೊಡಿರಿ. ನಾವಾದರೂ ನಿರುಪಾಯರಾಗಿ ಈ ಯುದ್ಧದಲ್ಲಿ ತೊಡಗಬೇಕಾಗಿದೆ. ಎಂದು ಕೇಳಿಕೊಂಡನು.

ಆಗ ಭೀಷ್ಮಾಚಾರ್ಯರು ಅತ್ಯಾನಂದದಿಂದ ಅರ್ಜುನನನ್ನು ಆಲಿಂಗಿಸಿಕೊಂಡು—"ವತ್ಸ, ನೀನು ನಿನ್ನ ಪ್ರತಿಪಕ್ಷದ ಸೇನಾಪತಿಯ ಬಳಿಯಲ್ಲಿ ಯುದ್ಧಕ್ಕೆ ಒಪ್ಪಿಗೆಯನ್ನು ಬೇಡಬಂದಿರುವದನ್ನು ನೋಡಿ ನನಗೆ ಬಹಳ ಸಂತೋಷವಾಗಿದೆ. ಇದು ನಿನ್ನಂಥ ವೀರ ಪುರುಷರಿಗೆ ಭೂಷಣವೇ ಸರಿ. ಎಲೈ ಪಾರ್ಥನೇ, ಈ ಯುದ್ಧದಿಂದ ಮಹಾತ್ಮನಾದ ಯುಧಿಷ್ಠಿರನ ಧರ್ಮರಾಜ್ಯವು ನೆಲೆಗೊಳ್ಳುವದೆಂದೂ, ಕುರುಕುಲವು ನಷ್ಟವಾಗುವದೆಂದೂ ನನ್ನ ಅಂತರಾತ್ಮವು ಹೇಳುತ್ತಿದೆ; ವೀರಶ್ರೇಷ್ಠನೇ, ಯುದ್ಧಕ್ಕೆ ನಿರ್ಮಲ ಮನಸ್ಸಿನಿಂದ ನಿನಗೆ ಒಪ್ಪಿಗೆಯನ್ನು ಕೊಟ್ಟಿದ್ದೇನೆ. ನಾನು ಯುದ್ಧದ ಪ್ರಸಕ್ತಿಯು ಬಾರದಂತೆ ಬೇಕಾದಷ್ಟು ಪ್ರಯತ್ನಿಸಿದರೂ ಪಾಪಿಷ್ಠನಾದ ದುರ್ಯೋಧನನ ಮನಸ್ಸು ತಿರುಗಲಿಲ್ಲ; ನೀನು ಸಂಕೋಚವಿಲ್ಲದೆ ಯುದ್ಧ ಮಾಡು; ನಾನು ದುರ್ಯೋಧನನ ಆಶ್ರಯದಲ್ಲಿದ್ದದರಿಂದ ಈಗ ಅವನ ಅಪ್ಪಣೆಯಂತೆ ನಡೆಯಬೇಕಾಗಿದೆ. ಆದದರಿಂದ ನಾನು ಆತನ ಪಕ್ಷದಲ್ಲಿದ್ದು ನಿಮ್ಮ ಮೇಲೆ ಶಸ್ತ್ರವನ್ನು ಎತ್ತಬೇಕಾಗಿದೆ. ಆದರೂ ನಾನು ಕೌರವ ಪಾಂಡವರಿಬ್ಬರಿಗೂ ಕಲ್ಯಾಣವಾಗಬೇಕೆಂದು ಬಯಸುವವನು. ನಾನು ವೃದ್ಧನಾಗಿದ್ದೇನೆ. ನಿನಗೆ ಅಂತಃಕರಣಪೂರ್ವಕವಾಗಿ ಆಶೀರ್ವಾದ ಮಾಡುತ್ತೇನೆ. ನೀನು ಕ್ಷತ್ರಿಯ ಧರ್ಮವನ್ನನುಸರಿಸಿ ಧರ್ಮಯುದ್ಧವನ್ನು ಮಾಡಿ, ಜಯವನ್ನು ಸಂಪಾದಿಸಬೇಕೆಂದು ಕೋರುತ್ತೇನೆ." ಎಂದು ಹೇಳಿದರು.

ಅರ್ಜುನನು ಶಿಬಿರಕ್ಕೆ ಬಂದು ಭೀಷ್ಮರಾಡಿದ ಮಾತುಗಳನ್ನೆಲ್ಲ ಧರ್ಮರಾಜನ ಬಳಿಯಲ್ಲಿ ಹೇಳಿದನು. ಪಾಂಡವರು ಈ ಮೇರೆಗೆ ಪಿತಾಮಹನ ಒಪ್ಪಿಗೆಯನ್ನೂ ಹರಕೆಯನ್ನೂ ಪಡೆದು ಯುದ್ಧಕ್ಕೆ ನಡೆದರು.

ಕುರುಕ್ಷೇತ್ರದ ರಣಾಂಗಣದಲ್ಲಿ ಕೌರವ ಪಾಂಡವರ ನಡುವೆ ಭಾರತಮಹಾಯುದ್ಧವು ಆರಂಭವಾಗಿದೆ. ಉಭಯ ಪಕ್ಷಗಳಲ್ಲಿ ಯುದ್ಧದ ಸಿದ್ಧತೆಯು ಬಹಳ ಚೆನ್ನಾಗಿದೆ. ವೀರಪುರುಷರು ಅಪೂರ್ವವಾದ ಉತ್ಸಾಹದಿಂದ ನಿಂತಿರುವರು. ಕೌರವ ಪಕ್ಷದಲ್ಲಿ ಭೀಷ್ಮಾಚಾರ್ಯರು ಸೇನಾಪತಿಯಾಗಿ ಮಹಾಶೌರ್ಯದಿಂದ ಯುದ್ಧವನ್ನು ಮಾಡುತ್ತಿರುವರು. ಗೆದ್ದ ಸೈನಿಕರ ಕೋಲಾಹಲ, ಸೋತ ಸೈನಿಕರ ಹಾಹಾಕಾರ, ಸಾಯಲಾದ ಸೈನಿಕರ ಆರ್ತಧ್ವನಿ, ಕುದುರೆಗಳ ಹೇಷಾರವ, ಆನೆಗಳ ಬೃಂಹಿತ, ರಥಗಳ ಘರ್ಘರಧ್ವನಿ ಮೊದಲಾದವುಗಳಿಂದ ಸಮರಾಂಗಣವು

ಭಯಂಕರ ಸ್ವರೂಪವನ್ನು ತಳೆದಿವೆ. ಇಂತು ಭೀಷ್ಮಾಚಾರ್ಯರ ಕಟ್ಟಪ್ಪಣೆಯಂತೆ ಧರ್ಮ ಯುದ್ಧವು ಮಹೋತ್ಸಾಹದಿಂದ ನಡೆಯಿತು.

ಮೊದಲನೆಯ ದಿವಸದ ಯುದ್ಧವು ಮುಗಿಯಿತು ಮರುದಿವಸ ಪ್ರಾತಃಕಾಲದಲ್ಲಿ ಪಾಂಡವಸೇನೆಯ ಮುಂದುಗಡೆಯಲ್ಲಿ ಅರ್ಜುನನು ಬಂದು ನಿಂತನು. ಧರ್ಮ ಭೀಮ ಮೊದಲಾದವರೂ ತಕ್ಕ ಸ್ಥಳಗಳಲ್ಲಿ ನಿಂತರು. ಸೂರ್ಯೋದಯಕ್ಕೆ ಸರಿಯಾಗಿ ಯುದ್ಧವು ಪ್ರಾರಂಭವಾಯಿತು. ಈ ದಿವಸ ಭೀಷ್ಮಾಚಾರ್ಯರು ಅಸಾಧಾರಣ ಪರಾಕ್ರಮವನ್ನು ತೋರ್ಪಡಿಸಿ ಪಾಂಡವರಿಗೆ ಅಂಜಿಕೆಯಾಗುವಂತೆ ಮಾಡಿದರು. ಆಗ ಅರ್ಜುನನು ಭೀಷ್ಮಾಚಾರ್ಯರನ್ನು ಎದುರಿಸಿ ಯುದ್ಧಕ್ಕೆ ನಿಂತನು. ಆದರೆ ಅರ್ಜುನನಿಗೆ ಭೀಷ್ಮರನ್ನು ಸೋಲಿಸುವ ಸಾಮರ್ಥ್ಯವು ಸಾಲದು. ಇಬ್ಬರೂ ಶಸ್ತ್ರಾಸ್ತ್ರ ಕುಶಲರಾದದರಿಂದಲೂ, ಇಬ್ಬರೂ ಅಪ್ರತಿಮಪರಾಕ್ರಮಶಾಲಿಗಳಾದದರಿಂದಲೂ ಒಬ್ಬರನ್ನೊಬ್ಬರು ಜಯಿಸುವುದಕ್ಕೆ ಇಲ್ಲವೆ ಹಿಂದೆ ಓಡಿಸುವದಕ್ಕೆ ಸಾಧ್ಯವಾಗಲಿಲ್ಲ. ಈ ಸಮಯದಲ್ಲಿ ಭೀಮಸೇನನು ಪ್ರತಿಪಕ್ಷಿಗಳ ಎದೆಯೊಡೆವಂತೆ ಸಿಂಹನಾದಮಾಡುತ್ತ ಮುಂದಕ್ಕೆ ಬರಲು ಅರ್ಜುನನು ಮತ್ತೊಂದೆಡೆಗೆ ಯುದ್ಧವನ್ನಾರಂಭಿಸಿದನು. ಇಷ್ಟರಲ್ಲಿ ಭೀಷ್ಮಾಚಾರ್ಯರು ಪಾಂಡವಪಕ್ಷದ ಹತ್ತು ಸಾವಿರ ಸೈನಿಕರನ್ನು ಕೊಂದು ತಮ್ಮ ಪ್ರತಿಜ್ಞೆಯನ್ನು ಪೂರ್ಣಮಾಡಿದರು. ಅಷ್ಟು ಹೊತ್ತಿಗೆ ಆ ದಿವಸದ ಯುದ್ಧವು ಮುಗಿಯಿತೆಂಬುದನ್ನು ಸೂಚಿಸುವ ಭೇರಿಯ ಧ್ವನಿಯು ಆಯಿತು. ಎಲ್ಲರೂ ಯುದ್ಧವನ್ನು ನಿಲ್ಲಿಸಿ ತಂತಮ ಪಾಳೆಯಕ್ಕೆ ನಡೆದರು.

ಈ ದಿವಸದ ಯುದ್ಧದಲ್ಲಿ ಅರ್ಜುನನ ಮಗನಾದ ಅಭಿಮನ್ಯುವು ಅಪೂರ್ವವಾದ ತನ್ನ ಸಮರ ಕೌಶಲ್ಯವನ್ನು ತೋರಿಸಿದನು. ಭೀಷ್ಮರ ರಥಧ್ವಜವನ್ನು ಮುರಿದನು; ಸಾವಿರಾರು ಸೈನಿಕರನ್ನು ಯಮಸದನಕ್ಕಟ್ಟಿದನು.

ಈ ಮೇರೆಗೆ ಆರಂಭದ ಐದು ದಿವಸಗಳಾದವು. ಅರ್ಜುನನ ಪರಾಕ್ರಮವನ್ನು ತಾಳಿಕೊಳ್ಳುವದು ಕೌರವಸೈನ್ಯಕ್ಕೆ ಅಸಾಧ್ಯವಾಯಿತು. ಭೀಷ್ಮರೂ ತಮ್ಮ ಪ್ರತಿಜ್ಞೆಯಂತೆ ಪ್ರತಿದಿವಸ ಪಾಂಡವ ಪಕ್ಷದ ಹತ್ತುಸಾವಿರ ಸೈನಿಕರನ್ನು ಕೊಲ್ಲದೆ ಬಿಡುತ್ತಿರಲಿಲ್ಲ. ಹೇಗಾದರೂ ಒಟ್ಟಿನಲ್ಲಿ ಕೌರವಸೈನ್ಯವೇ ಹೆಚ್ಚಿಗೆ ಹಾಳಾಗುತ್ತ ನಡೆಯಿತು. ಇದನ್ನು ನೋಡಿ ದುರ್ಯೋಧನನು ಭೀಷ್ಮಾಚಾರ್ಯರ ಬಳಿಗೆ ಬಂದು ಪಿತಾಮಹರೇ, ತಮ್ಮಂಥ ಅಸ್ತ್ರವಿದ್ಯಾವಿಶಾರದರು ನಮ್ಮ ಕಡೆಗೆ ಸೇನಾಪತಿಗಳಾಗಿರುವಾಗ ನಮ್ಮ ಸೈನ್ಯವೇ ಅಂಜಿ ಓಡಿಹೋಗುತ್ತಿರುವದನು ನೋಡಿದರೆ ಬಹಳ ಆಶ್ಚರ್ಯವಾಗುತ್ತದೆ. ಇದು ನಮಗೆ ನಾಚಿಕೆಯ ಮಾತು

ನಮ್ಮ ಮೇಲೆ ಒದಗಿದ ಸಂಕಟವನ್ನು ನೋಡಿಯೂ ತಾವು ಹೀಗೆ ಉಪೇಕ್ಷಿಸುವದನ್ನು ನೋಡಿದರೆ ತಮ್ಮ ಮನಸ್ಸಿನಲ್ಲಿ ಪಾಂಡವರಿಗೇ ಜಯವು ದೊರೆಯಬೇಕೆಂದಿರುವಂತೆ ತೋರುತ್ತದೆ; ಎಂದು ನೊಂದು ನುಡಿದನು.

ದುರ್ಯೋಧನನ ಮಾತನ್ನು ಕೇಳಿ ಭೀಷ್ಮರು ಸ್ವಲ್ಪನಕ್ಕು ಕುರುರಾಜಾ, ಪಾಂಡವರು ಅಸಾಧಾರಣ ಪರಾಕ್ರಮ ಶಾಲಿಗಳೆಂದೂ, ಅವರನ್ನು ಜಯಿಸುವದು ನಿನ್ನಿಂದಾಗದೆಂದೂ ಮೊದಲೇ ನಿನಗೆ ಹೇಳಿರುವೆನು. ಈ ವರೆಗೆ ನಾನು ಯುದ್ಧದಲ್ಲಿ ಕರ್ತವ್ಯವಿಮುಖನಾಗಿಲ್ಲ; ಮುಂದೆಯೂ ಆಗುವದಿಲ್ಲ ಆದರೂ ಸತ್ವಶಾಲಿಗಳಾದ ಪಾಂಡವರನ್ನು ಜಯಿಸುವ ಶಕ್ತಿಯು ಇನ್ನೂ ಜಗತ್ತಿನಲ್ಲಿ ಹುಟ್ಟಿಲ್ಲವೆಂದು ನನಗೆ ತೋರುತ್ತದೆ ಎಂದು ಹೇಳಿದರು. ದುರ್ಯೋಧನನಿಗೆ ಸಮಾಧಾನವಾಗಲಿಲ್ಲ.

ಮರುದಿವಸ ಭೀಷ್ಮಾಚಾರ್ಯರು ಪಾಂಡವ ಸೈನ್ಯದಮೇಲೆ ಭಯಂಕರವಾದ ಬಾಣವೃಷ್ಟಿಯನ್ನು ಸುರಿಸಿದರು. ಪಾಂಡವ ಸೈನ್ಯವು ಛಿನ್ನವಿಛಿನ್ನವಾಗಿ ಹೋಯಿತು. ಎಲ್ಲೆಲ್ಲಿಯೂ ಹಾಹಾಕಾರವೆದ್ದಿತು. ಈ ಸ್ಥಿತಿಯನ್ನು ಕಂಡು ಶ್ರೀಕೃಷ್ಣನು ಆಲೋಚನೆಗೊಳಗಾಗಿ ಅರ್ಜುನನ ರಥವನ್ನು ಭೀಷ್ಮರೆದುರಿಗೆ ತಂದನು. ಮತ್ತೆ ತುಮುಲ ಸಂಗ್ರಾಮವು ನಡೆಯಿತು. ಭೀಷ್ಮಾಚಾರ್ಯರು ಅರ್ಜುನನ ಆಗಿನ ಶರಸಂಧಾನವನ್ನು ಬಹಳವಾಗಿ ಹೊಗಳಿದರು. ಈ ಸಮಯದಲ್ಲಿ ಪಾಂಡವಸೇನೆಯು ಕೌರವಸೇನೆಯನ್ನು ಕನಿದು ಬಹಳ ಹಾನಿಯನ್ನು ಮಾಡಿತು.

ಪ್ರತಿದಿವಸ ಭೀಷ್ಮಾಚಾರ್ಯರು ಪಾಂಡವಸೈನ್ಯ ದಲ್ಲಿ ಹತ್ತುಸಾವಿರ ಸೈನ್ನಿಕರನ್ನು ಕೊಲ್ಲುವರು. ಮತ್ತು ಅರ್ಜುನನು ಭೀಷ್ಮರನ್ನು ಎದುರಿಸಿದಾಗ ಪಾಂಡವಸೈನ್ಯವು ವಿಶೇಷವಾಗಿ ಆವೇಶಗೊಂಡು ಕೌರವಸೈನ್ಯವನ್ನೆಲ್ಲ ಚದರಿಸಿ ಕಂಗೆಡಿಸುವದು.

ಏಳನೆಯ ದಿವಸದ ಯುದ್ಧದಲ್ಲಿ ಪಾಂಡವಸೈನ್ಯದೊಳಗಿನ ಅಭಿಮನ್ಯು ಭೀಮನೇ ಮೊದಲಾದ ವೀರರಿಂದ ಕೌರವಸೇನೆಯು ಬಹಳ ಹಾನಿಯನ್ನು ಹೊಂದಿತು. ಆ ದಿವಸದ ಯುದ್ಧವು ಮುಗಿದಬಳಿಕ ಕೌರವರ ಪಾಳಯದಲ್ಲಿ ಹಾಹಾಕಾರವೆದ್ದಿತು. ಆಗ ದುರ್ಯೋಧನನು ಭೀಷ್ಮಾಚಾರ್ಯರ ಬಳಿಗೆ ಬಂದು ನೀವು ಪಾಂಡವಪಕ್ಷಪಾತದಿಂದ ಯುದ್ಧಮಾಡುತ್ತಿರುವಂತೆ ತೋರುವದೆಂದು ಕೋಪದಿಂದ ದೋಷಾರೋಪ ಮಾಡಿದನು. ಆದರೆ ಭೀಷ್ಮಾಚಾರ್ಯರು ಅವನ ಮಾತಿಗೆ

ಕಿವಿಗೊಡದೆ ಗೌರವದಿಂದಲೇ ಮಾತಾಡಿದರು. ಮತ್ತು ದುರ್ಯೋಧನನ ಸಮಾಧಾನಕ್ಕಾಗಿ ಬಾಣಗಳನ್ನು ಕೈಯಲ್ಲಿ ಹಿಡಿದು ಈ ಮೇರೆಗೆ ವಚನ ಕೊಟ್ಟರು; "ವತ್ಸಾ, ದುರ್ಯೋಧನಾ, ನಾಳೆಯ ದಿವಸ ಪಾಂಡವರನ್ನೆಲ್ಲ ಈ ಐದು ಬಾಣಗಳಿಂದ ನಾಶಗೊಳಿಸುವೆನು, ಆದರೆ ಕೃಷ್ಣನು ಮಾತ್ರ ನನ್ನನ್ನು ಮೋಸಗೊಳಿಸಬಾರದು. ಈ ವರೆಗೆ ಕೃಷ್ಣನು ಅವರನ್ನು ರಕ್ಷಿಸಿಕೊಳ್ಳದಿದ್ದರೆ ಅವರು ನನ್ನ ಬಾಣಗಳಿಗೆ ಎಂದೂ ಈಡಾಗುತ್ತಿರಲಿಲ್ಲ. ನಾಳೆ ಅವರನ್ನು ಯಮಸದನಕ್ಕಟ್ಟಿಯೇ ಶಿಬಿರಕ್ಕೆ ಮರಳಿ ಬರುವೆನು." ಈ ಮಾತುಗಳನ್ನು ಕೇಳಿ ಕೌರವಸೇನೆಗೆ ಅತ್ಯಾನಂದವಾಯಿತು. ಯಾಕೆಂದರೆ, ಭೀಷ್ಮರು ನುಡಿದ ನುಡಿಯು ಸುಳ್ಳಾಗದೆಂಬ ನಂಬಿಗೆಯಿತ್ತು. ಪಾಂಡವರು ಈ ಸುದ್ದಿಯನ್ನು ಕೇಳಿ ಚಿಂತೆಗೊಳಗಾದರು. ಪಾಂಡವರ ನಿರುತ್ಸಾಹಸ್ಥಿತಿಯನ್ನು ಕಂಡು ಶ್ರೀ ಕೃಷ್ಣನು—ಧರ್ಮರಾಜಾ, ನೀನು ಅಂಜಬೇಡ; ನಾನು ಭೀಷ್ಮರ ಪ್ರತಿಜ್ಞೆಯನ್ನು ಹುಸಿ ಮಾಡಬಲ್ಲೆನು. ಎಂದು ಹೇಳಿ ಅರ್ಜುನನ್ನು ಸಂಗಡ ಕರೆದುಕೊಂಡು ಆಕ್ಷಣವೇ ಶಿಬಿರದಿಂದ ಹೊರಬಿದ್ದು ಹೋದನು.

ಪಾಂಡವರ ವನವಾಸ ಕಾಲದಲ್ಲಿ ಒಂದಾನೊಂದು ದಿವಸ ಚಿತ್ರಸೇನನೆಂಬ ಗಂಧರ್ವನು ದುರ್ಯೋಧನನನ್ನು ಹೆಡಮುಡಿ ಕಟ್ಟಿ ಒಯ್ದಿದ್ದನು. ಆಗ ಅರ್ಜುನನು ದುರ್ಯೋಧನನನ್ನು ಬಿಡಿಸಿಕೊಂಡು ಬಂದಿದ್ದನು. ಅದರಿಂದ ದುರ್ಯೋಧನನು ಸಂತುಷ್ಟನಾಗಿ ಅರ್ಜುನನಿಗೆ ಒಂದು ವರವನ್ನು ಕೊಟ್ಟಿದ್ದನು. ಆದರೆ ಅರ್ಜುನನು ಆಗ ವರವನ್ನು ಕೇಳಿಕೊಳ್ಳದೆ ಮುಂದೆ ಎಂದಾದರೂ ಕೇಳಿಕೊಳ್ಳುವೆನೆಂದು ಹೇಳಿದ್ದನು. ಶ್ರೀ ಕೃಷ್ಣನು ಈಗ ಅರ್ಜುನನಿಗೆ ಅದರ ನೆನಪು ಬರುವಂತೆ ಮಾಡಿ—ನೀನು ಈಗಲೇ ದುರ್ಯೋಧನನ ಬಳಿಗೆ ಹೋಗಿ ರಾಜಕಿರೀಟವನ್ನೂ, ಆತನ ಉಡಿಗೆತೊಡಿಗೆಗಳನ್ನೂ ವರವಾಗಿ ಬೇಡಿಕೊಂಡು ಬಾ, ಹಾಗೆ ಮಾಡಿದರೆ ನಿನ್ನ ಕೆಲಸವಾಗುವದು; ಎಂದು ಹೇಳಿ ಆತನನ್ನು ಕಳುಹಿದನು. ಆ ಮೇರೆಗೆ ಅರ್ಜುನನು ಕೌರವ ಶಿಬಿರವನ್ನು ಪ್ರವೇಶಿಸಲು ಶ್ರೀ ಕೃಷ್ಣನು ಹೊರಗೆ ಆತನ ದಾರಿಯ ನೋಡುತ್ತ ಕುಳಿತುಕೊಂಡನು.

ಅಷ್ಟರಲ್ಲಿ ಅರ್ಜುನನು ಕಿರೀಟವನ್ನೂ, ಉಡುಪುಗಳನ್ನೂ ಪಡೆದುಕೊಂಡು ಬಂದನು. ಶ್ರೀ ಕೃಷ್ಣನು ತಾನೇ ಅವುಗಳನ್ನು ಅರ್ಜುನನಿಗೆ ತೊಡಿಸಿದನು. ಬಳಿಕ ಕಪಟವೇಷದ ಅರ್ಜುನನನ್ನು ಕರೆದುಕೊಂಡು ಭೀಷ್ಮರ ಬಳಿಗೆ ಹೋಗಿ ಮೊದಲು ಅರ್ಜುನನನ್ನು ಮುಂದೆ ಕಳುಹಿದನು. ಭೀಷ್ಮರು ಇಷ್ಟು ರಾತ್ರಿಯಲ್ಲಿ ದುರ್ಯೋಧನನು ಯಾಕೆ ಬಂದಿರಬಹುದೆಂದು ಬೆರಗಾದರು. ಆಗ ಕಪಟವೇಷದ ಅರ್ಜುನನು—ಪಿತಾಮಹರೇ, ನೀವು ನಾಳೆ ಪಾಂಡವರನ್ನು ಸಂಹರಿ

ಸುವದಕ್ಕೆ ಉಪಯೋಗಿಸುವ ಬಾಣಗಳನ್ನು ನನಗೆ ಕೊಡಿರಿ; ನಾನೇ ಆ ಬಾಣಗಳಿಂದ ಪಾಂಡವರನ್ನು ಸಂಹರಿಸುವೆನು; ಎಂದು ಕೇಳಿಕೊಂಡನು. ಭೀಷ್ಮರು ದುರ್ಯೋಧನನೆಂಬ ಭ್ರಾಂತಿಯಿಂದ ಆ ಬಾಣಗಳನ್ನು ಕೊಟ್ಟುಬಿಟ್ಟರು. ಅರ್ಜುನನು ಒಡನೆಯೇ ಹೊರಟು ಬಂದನು. ಒಳಿಕ ಶ್ರೀ ಕೃಷ್ಣನು ಭೀಷ್ಮರ ದರ್ಶನಕ್ಕೆ ಹೋದನು. ಆಗ ಭೀಷ್ಮರಿಗೆ ಈ ತಂತ್ರವೆಲ್ಲ ತಿಳಿದು ಬರಲು ಅವರು ಕೃಷ್ಣನನ್ನು ಕುರಿತು— ಕೃಷ್ಣಾ, ಇದೆಲ್ಲ ನಿನ್ನ ಮಾಯಾ ಜಾಲವು; ನನ್ನ ಪ್ರತಿಜ್ಞೆಯನ್ನು ಹುಸಿ ಮಾಡಬೇಕೆಂಬ ಹವಣಿಕೆಯು ನಿನಗೆ ಇಷ್ಟೇಕೆ? ನಾಳೆ ನನ್ನ ಪ್ರತಿಜ್ಞೆಯು ಸುಳ್ಳಾಗುವದಾದರೆ ನಿನ್ನ ಪ್ರತಿಜ್ಞೆಯನ್ನೂ ಸುಳ್ಳು ಮಾಡುವೆನೆಂದು ತಿಳಿ ಎಂದು ಹೇಳಿದರು.

ಯುದ್ಧದ ಎಂಟನೆಯ ದಿವಸ ಬೆಳಗಾಯಿತು. ಆ ದಿವಸ ಭೀಷ್ಮಾಚಾರ್ಯರು ಭಯಂಕರ ಸ್ವರೂಪವನ್ನು ತಾಳಿದರು. ಪಾಂಡವ ಸೇನೆಯೆಲ್ಲ ನಿರ್ಮೂಲವಾಗುವ ಲಕ್ಷಣವು ತೋರಹತ್ತಿತು. ಅರ್ಜುನನ ಆಟವೇನೂ ನಡೆಯದಂತಾಯಿತು. ಭೀಷ್ಮರ ಪ್ರಳಯಕಾಲದ ರುದ್ರಮೂರ್ತಿಯನ್ನು ಧಾರಣ ಮಾಡಿದಂತೆ ತೋರಿತು. ಭೀಷ್ಮರ ಭಾಣವೃಷ್ಟಿಯಲ್ಲಿ ಅರ್ಜುನನು ಉಳಿಯಲಾರನೆಂದು ತೋರುತ್ತಿತ್ತು. ಈಗ ಶ್ರೀ ಕೃಷ್ಣನು ಸುಮ್ಮನೆ ಇರುವದು ಹೇಗೆ? ಅರ್ಜುನನನ್ನು ಉಳಿಸಿಕೊಳ್ಳುವದಕ್ಕಾಗಿ ರಥದಿಂದಿಳಿದು ಸುದರ್ಶನವನ್ನು ಕೈಯಲ್ಲಿ ಹಿಡಿದುಕೊಂಡು ತಾನೇ ಭೀಷ್ಮರ ಮೇಲೆ ಸಾಗಿ ಹೋದನು,

ಭಾರತ ಯುದ್ಧವು ಆರಂಭವಾಗುವ ಮೊದಲು ಶ್ರೀ ಕೃಷ್ಣನು ತಾನು ಯಾವ ಪಕ್ಷದಿದದಲೂ ಶಸ್ತ್ರವನ್ನು ಹಿಡಿಯುವದಿಲ್ಲನೆಂದು ಪ್ರತಿಜ್ಞೆ ಮಾಡಿದ್ದನು. ಈಗ ಶಸ್ತ್ರಧಾರಿಯಾಗಿ ಯುದ್ಧಕ್ಕೆ ಬರುತ್ತಿರುವದನ್ನು ಕಂಡು ಭೀಷ್ಮರು ಆತನ ಪ್ರತಿಜ್ಞಾಭಂಗವಾದುದಕ್ಕೆ ನಕ್ಕು ತಾವು ಶಸ್ತ್ರಗಳನ್ನು ಕೆಳಗಿರಿಸಿ ಸಾವಿಗೆ ಸಿದ್ಧರಾಗಿ ಕೈಜೋಡಿಸಿ ಕೃಷ್ಣನಿಗೆ ನಮಸ್ಕಾರ ಮಾಡಿ ನಿಂತರು. ಶ್ರೀ ಕೃಷ್ಣನಿಗೆ ನಾಚಿಕೆ ಬಂದತಾಗಿ ತನ್ನ ರಥಕ್ಕೆ ಮರಳಿ ಬರುವಷ್ಟರಲ್ಲಿ ಭೀಷ್ಮರು ಪಾಂಡವರ ಪಕ್ಷದ ಹತ್ತು ಸಾವಿರ ರಥಿಕರನ್ನು ಸಂಹರಿಸಿ ಆ ದಿವಸದ ಯುದ್ಧವನ್ನು ಮುಗಿಸಿದರು.

ಒಂಬತ್ತು ದಿನಗಳು ಮುಗಿದವು. ಭೀಷ್ಮಾಚಾರ್ಯರ ಯುದ್ಧದ ಇನ್ನೊಂದು ದಿವಸವು ಉಳಿಯಿತು. ಈ ಕೊನೆಯ ದಿವಸ ಅವರು ತೋರಿಸಿದ ಪರಾಕ್ರಮವನ್ನು ಕಂಡು ಪಾಂಡವರಿಗೆ ದಿಕ್ಕು ತಪ್ಪಿದಂತಾಯಿತು. ಆಗ ಅವರು ಶ್ರೀ ಕೃಷ್ಣನ ಬಳಿಗೆ

ಹೋಗಿ ತಮ್ಮ ಗತಿಯೇನೆಂದು ಕೇಳಿದರು. ಆಗ ಶ್ರೀ ಕೃಷ್ಣನು—ಇಚ್ಛಾ ಮರಣಿಗಳಾದ ಭೀಷ್ಮಾಚಾರ್ಯರನ್ನು ಅನ್ಯರು ಕೊಲ್ಲಲಾಪರೇ ? ಅವರು ತಾವೇ ದೇಹವನ್ನು ಬಿಡಬೇಕಲ್ಲದೆ ಬೇರೆ ಉಪಾಯವಿಲ್ಲ. ಆದರೂ ನೀವು ಅಂಜುವ ಕಾರಣವಿಲ್ಲ. ನಪುಂಸಕನನ್ನು ಕಂಡರೆ ತಾವು ಶಸ್ತ್ರತ್ಯಾಗ ಮಾಡುವೆವೆಂದು ಭೀಷ್ಮರೇ ಒಮ್ಮೆ ಹೇಳಿರುವರು. ಆದದರಿಂದ ನಾಳೆ ನಾವು ಅರ್ಜುನನ ರಥದ ಮುಂದುಗಡೆಯಲ್ಲಿ ಶಿಖಂಡಿಯನ್ನು ಕುಳ್ಳಿರಿಸಿ ಯುದ್ಧಕ್ಕೆ ಹೋಗಬೇಕು, ಅಂದರೆ ಭೀಷ್ಮರು ದೇಹತ್ಯಾಗ ಮಾಡುವ ಸಂದರ್ಭವು ಬರುವದು; ಎಂದು ಹೇಳಿದನು.

ಈ ಆಲೋಚನೆಯು ಪಾಂಡವರಿಗೆ ಸರಿದೋರಲಿಲ್ಲ. ಆದರಲ್ಲಿಯೂ ಅರ್ಜುನನು ಈ ಯುಕ್ತಿಯನ್ನು ಒಪ್ಪಲಿಲ್ಲ. ಆಗ ಶ್ರೀ ಕೃಷ್ಣನು ಅರ್ಜುನನನ್ನು ಕುರಿತು— ನೀನು ಭೀಷ್ಮರ ಸಂಹಾರ ಮಾಡುವೆನೆಂದು ಪ್ರತಿಜ್ಞೆ ಮಾಡಿರುವೆ. ನಿನ್ನನ್ನುಳಿದರೆ ಪಾಂಡವ ಸೇನೆಯಲ್ಲಿ ಈ ಕೆಲಸ ಮಾಡುವ ಸಮರ್ಥರು ಬೇರೆ ಯಾರೂ ಇಲ್ಲ. ಮಾಡಿದ ಪ್ರತಿಜ್ಞೆಯನ್ನು ನೆರವೇರಿಸದಿರುವದು ಕ್ಷತ್ರಿಯನಾದ ನಿನಗೆ ಸರಿಯೆನಿಸದು. ಭೀಷ್ಮರ ಮೃತ್ಯುವು ಸಮೀಪಿಸಿರುವದು, ಆದುದರಿಂದ ನೀನು ನಿಮಿತ್ತಮಾತ್ರನಾಗಿ ನಿಂತು ಈ ಕೆಲಸವನ್ನು ಕೊನೆಗಾಣಿಸು ಎಂದು ಉಪದೇಶಿಸಿದನು.

ನಿರ್ವಾಹವಿಲ್ಲದೆ ಅರ್ಜುನನು ಒಪ್ಪಿದನು. ಯುದ್ಧದ ಪೂರ್ವ ಸಿದ್ಧತೆಯು ಚೆನ್ನಾಗಿ ಮಾಡಲ್ಪಟ್ಟಿತು. ಕೌರವ ಸೇನೆಯಲ್ಲಿ ಅಮಂಗಲ ಚಿಹ್ನೆಗಳು ತೋರಲಾರಂಭಿಸಿದವು. ವೀರಶ್ರೇಷ್ಠರಾದ ಭೀಷ್ಮರು ಅವನ್ನು ಲಕ್ಷ್ಯಕ್ಕೆ ತಾರದೆ ಯುದ್ಧಕ್ಕೆ ಸಜ್ಜಾಗಿ ನಿಂತರು. ಅವರ ರಣಕೌಶಲಕ್ಕೆ ಪಾಂಡವ ಸೇನೆಯು ಚಕಿತವಾಯಿತು; ಅರ್ಜುನನು ನಿತ್ತರಿಸಲಾರದೆ ಹೋದನು. ಭೀಮಾದಿಗಳು ಅರ್ಜುನನನ್ನು ಕಾಪಾಡುವದರಲ್ಲಿಯೆ ತೊಡಗಿದರು. ಭೀಷ್ಮರ ಶರವರ್ಷದಿಂದ ಪಾಂಡವ ಸೇನೆಯು ನೆಲಕ್ಕುರುಳಿತು. ಆಗ ಶ್ರೀಕೃಷ್ಣನ ಸಂಕೇತದಿಂದ ಶಿಖಂಡಿಯು ಅರ್ಜುನನ ರಥದ ಮುಂದುಗಡೆಯಲ್ಲಿ ಬಂದು ಕುಳಿತನು. ಶಿಖಂಡಿಯುನ್ನು ನೋಡಿದೊಡನೆ ಭೀಷ್ಮರು ನಕ್ಕು ಶಸ್ತ್ರಾಸ್ತ್ರಗಳನ್ನು ಕೆಳಗಿಟ್ಟು ಸುಮ್ಮನೆ ಕುಳಿತರು. ಮತ್ತು ತಾವು ದೇಹತ್ಯಾಗ ಮಾಡಬೇಕೆಂದಿರುವ ಸಮಯವು ಸಮೀಪಿಸಿತೆಂದು ತಿಳಿದು ಶ್ರೀಕೃಷ್ಣನ ಮಾನಸ ಪೂಜೆಯನ್ನಾರಂಭಿಸಿದರು.

ಶಿಖಂಡಿಯ ಬಾಣಗಳಿಂದ ಭೀಷ್ಮರ ಸರ್ವಾಂಗವೆಲ್ಲ ಮುಚ್ಚಿಹೋಯಿತು. ಆದರೂ ಅವರು ಅವನ್ನು ಕಣ್ಣೆತ್ತಿ ನೋಡಲಿಲ್ಲ ಅರ್ಜುನನೂ ಎಷ್ಟೋ ಬಾಣಗಳನ್ನೆಸೆದನು. ಹೀಗೆ ಮೈತುಂಬ ಬಾಣಗಳೇ ನಟ್ಟಿರಲು ಅರ್ಜುನನ ಮತ್ತೊಂದು

ಬಾಣವು ಭೀಷ್ಮರ ಎದೆಗೆ ಬಡಿಯಿತು. ಆಗ ಅವರು ರಥದಿಂದ ನೆಲಕ್ಕುರುಳಿದರು. ಆದರೆ ಸರ್ವಾಂಗದಲ್ಲಿ ಬಾಣಗಳು ನೆಟ್ಟಿದ್ದರಿಂದ ಅವರ ದೇಹಕ್ಕೆ ಭೂಸ್ಪರ್ಶವಾಗಲಿಲ್ಲ. ಶರಮಂಚದಮೇಲೆ ಅವರ ದೇಹವು ನಿಂತಿತು. ಭೀಷ್ಮರ ಅವಸ್ಥೆಯನ್ನು ಕಂಡು ಕೌರವಸೇನೆಯೆಲ್ಲ ದೆಸೆಗೆಟ್ಟಿತು. ಯುದ್ಧವು ನಿಂತುಹೋಯಿತು. ಕೌರವರೂ ಪಾಂಡವರೂ ಪಿತಾಮಹರ ಬಳಿಗೆ ಬಂದರು ಭೀಷ್ಮರು ಸಮೀಪದಲ್ಲಿ ನಿಂತ ಮೊಮ್ಮಕ್ಕಳನ್ನು ನೋಡಿ ತಲೆಯನ್ನಿಡುವದಕ್ಕೆ ತಲೆದಿಂಬನ್ನು ಕೊಡಿರೆಂದು ಕೇಳಿದರು. ದುರ್ಯೋಧನನು ಬಹು ಮೃದುವಾದ ಒಂದು ದಿಂಬನ್ನು ತರಿಸಿ ಅದನ್ನು ಕೊಡಹೋದನು ಆದರೆ ಭೀಷ್ಮರು ಅದಕ್ಕೆ ನಕ್ಕು ಮಗನೇ, ಈ ತಲೆದಿಂಬು ವೀರಪುರುಷರ ಮೃತ್ಯುಶಯ್ಯೆಗೆ ತಕ್ಕದ್ದಲ್ಲ; ಎಂದು ಹೇಳಿ ಅರ್ಜುನನನ್ನು ಕುರಿತು- ವತ್ಸಾ, ನೀನು ನನಗೆ ತಲೆದಿಂಬನ್ನು ಕೊಡು ಎಂದು ಕೇಳಿದರು. ಆಗ ಅರ್ಜುನನು ಬತ್ತಳಿಕೆಯೊಳಗಿಂದ ಮೂರು ಬಾಣಗಳನ್ನು ಹೊರದೆಗೆದು ಬಿಲ್ಲಿಗೆ ಹೂಡಿ ಭೀಷ್ಮರ ಹಿಂದಲೆಗೆ ಹೊಡೆದನು. ಈ ಮೂರು ಬಾಣಗಳೇ ತಲೆದಿಂಬಿನಂತೆ ಆದವು. ಭೀಷ್ಮರು ಅರ್ಜುನನ ಈ ಕೃತ್ಯಕ್ಕೆ ಮೆಚ್ಚಿದರು

ಅಷ್ಟರಲ್ಲಿ ಸೂರ್ಯಾಸ್ತವಾಯಿತು. ಕತ್ತಲೆ ಕವಿಯಿತು. ಆಗ ಭೀಷ್ಮರು ಎಲ್ಲರಿಗೂ ಶಿಬಿರಕ್ಕೆ ಹೋಗಹೇಳಿದರು. ಮತ್ತು ತಾವು ಸೂರ್ಯನು ಉತ್ತರಾಯಣಕ್ಕೆ ಬರುವವರೆಗೆ ಹೀಗೆಯೇ ಶರಮಂಚದಮೇಲೆ ಮಲಗಿ ಉತ್ತರಾಯಣದಲ್ಲಿ ದೇಹತ್ಯಾಗ ಮಾಡುವೆವೆಂದು ಹೇಳಿದರು

ದುರ್ಯೋಧನನು ಭೀಷ್ಮರ ಸಲುವಾಗಿ ಸುಪ್ರಸಿದ್ಧರಾದ ವೈದ್ಯರನ್ನು ಕರೆಯಿಸಿದನು. ಭೀಷ್ಮರು ದುರ್ಯೋಧನನ ಸಂಭ್ರಮವನ್ನು ನೋಡಿ ಮಗನೇ, ಸುಮ್ಮನೆ ವೈದ್ಯರಿಗೆ ಆಯಾಸಕೊಡುವೆ; ನಾನು ಇದೇ ರೀತಿಯಿಂದ ಮಲಗಿ ದೇಹತ್ಯಾಗಮಾಡುವದು ನಿಶ್ಚಯ. ಈಗ ನೀನು ಶಿಬಿರಕ್ಕೆ ತೆರಳು. ಇನ್ನು ಮುಂದೆ ಈ ಭಯಂಕರವಾದ ಯುದ್ಧವು ನಡೆಯದಂತೆ ಏನಾದರೂ ಉಪಾಯವನ್ನು ಮಾಡುವದಿದ್ದರೆ ಮಾಡು ಎಂದು ಉಪದೇಶಿಸಿ ಆತನನ್ನು ಕಳುಹಿಕೊಟ್ಟರು.

ಮರುದಿವಸ ಬೆಳಗ್ಗೆ ಮತ್ತೆ ಕೌರವರೂ ಪಾಂಡವರೂ ಭೀಷ್ಮರ ದರ್ಶನಕ್ಕೆ ಬಂದರು. ಭೀಷ್ಮರು ಸರಳ ಮಂಚದ ಮೇಲೆ ಶಾಂತತನದಿಂದ ಮಲಗಿದ್ದಾರೆ! ಮುಖದಮೇಲೆ ಬಳಲಿಕೆಯ ಚಿಹ್ನವೇನೂ ಇಲ್ಲ. ಇದನ್ನು ನೋಡಿ ಎಲ್ಲರೂ ಬೆರಗಾದರು. ದುರ್ಯೋಧನನು ಆಗ ಪಿತಾಮಹರ ಆಹಾರದ ಸಲುವಾಗಿ ಹಲವು ತರದ ಉತ್ತಮೋತ್ತಮ ಖಾದ್ಯಪೇಯಗಳನ್ನು ತರಿಸಿ ಕೊಡಹೋದನು. ಆದರೆ ಭೀಷ್ಮರು- ಮಗನೇ ನಾನು ಇನ್ನು ಸ್ವಲ್ಪಕಾಲದಲ್ಲಿ ಈ ಲೋಕವನ್ನು ಬಿಡ

ತಕ್ಕವನು. ಇವನನ್ನೇನು ಮಾಡಲಿ; ಬೇಡ ಎಂದು ಹೇಳಿದರು. ಅವನು ಕೈಯಿಂದ ಮುಟ್ಟಲೂ ಇಲ್ಲ. ಆದರೆ ಕಂಠವು ಒಣಗಿದೆ ನೀರಿನ ವ್ಯವಸ್ಥೆಯನು ಮಾಡು ಎಂದು ಹೇಳಿದರು. ಆಗ ದುರ್ಯೋಧನನು ಬಂಗಾರದ ಪಾತ್ರೆಯಲ್ಲಿ ಅತಿ ಸ್ವಚ್ಛವಾದ ನೀರನ್ನು ತರಿಸಿದನು. ಆದರ ಭೀಷ್ಮರು ಅರ್ಜುನನ ಕಡೆಗೆ ನೋಡಿ-ವೀರಶ್ರೇಷ್ಠನಾದ ಅರ್ಜುನನೇ, ವೃಕ್ಷ್ಯಶಯ್ಯೆಯ ಮೇಲೆ ಮುಮೂರ್ಷು ವಾಗಿ ಬಿದ್ದಿರುವ ವೀರಪುರುಷನಿಗೆ ತಕ್ಕ ನೀರಿನ ವ್ಯವಸ್ಥೆಯನ್ನು ಮಾಡು ಎಂದು ಹೇಳಿದರು. ಕೂಡಲೆ ಅರ್ಜುನನು ಗಾಂಡೀವಕ್ಕೆ ಬಾಣವನ್ನು ಹೂಡಿ ಅಲ್ಲಿಯೇ ಭೂತಲವನ್ನು ವಿದಾರಿಸಿ ನೀರು ಪುಟಿಯುವಂತೆ ಮಾಡಿದನು. ಆ ನೀರನ್ನು ಕುಡಿದು ಭೀಷ್ಮರು ಸಂತೋಷಬಟ್ಟರು. ಕೈಗಳನ್ನೆತ್ತಿ ಅರ್ಜುನನಿಗೆ ಆಶೀರ್ವಾದ ಮಾಡಿದರು.

ಭೀಷ್ಮರು ನೀರನ್ನು ಕುಡಿದು ತೃಪ್ತರಾದರು. ಅರ್ಜುನನು ಅಪ್ಪಣೆಪಡೆದು ಕೊಂಡು ಹೊರಡಬೇಕೆಂದಿದ್ದನು. ಆಗ ಭೀಷ್ಮಾಚಾರ್ಯರು ಆತನನ್ನು ಕುರಿತು-- ಮಗನೇ, ನಿನ್ನ ಅಸಾಧಾರಣ ಬುದ್ಧಿಯನ್ನೂ, ಅದ್ವಿತೀಯ ಪರಾಕ್ರಮವನ್ನೂ ಕಂಡು ಬಹಳ ಸಂತೋಷವುಳ್ಳವನಾದೆನು. ನಿನ್ನೊಡನೆ ಯುದ್ಧ ಮಾಡಬಲ್ಲ ವೀರನು ಈ ಜಗತ್ತಿನಲ್ಲಿ ಯಾವನೂ ಇಲ್ಲ ನಾನು ದುರ್ಬುದ್ಧಿಯಾದ ದುರ್ಯೋಧನನನ್ನು ಕುರಿತು ಈ ಯುದ್ಧದ ವ್ಯಸನವನ್ನು ಬಿಡು ಎಂದು ಮೇಲೆ ಮೇಲೆ ಹೇಳುತ್ತ ಬಂದಿರುವೆನು. ಆತನು ನನ್ನ ಮಾತಿಗೆ ಕಿವಿಗೊಡಲಿಲ್ಲ. ನಾನು ಈ ಯುದ್ಧದ ಭವಿಷ್ಯವನ್ನು ನೆನೆದು ಕಳವಳಗೊಂಡಿರುವೆನು. ಎತ್ತ ಧರ್ಮವೋ ಅತ್ತ ಜಯವು ಎಂಬ ಮಾತು ಸಿದ್ಧವಾದದ್ದು. ಶ್ರೀಕೃಷ್ಣನು ನಿಮ್ಮ ಕಡೆಗೆ ಇರುವದರಿಂದ ನಿಮಗೇ ಜಯವು ದೊರೆಯುವದೆಂದು ನಾನು ನಿಶ್ಚಯಿಸಿರುವೆನು. ಜ್ಞಾನವೃದ್ಧರೂ ವಯೋವೃದ್ಧರೂ ಆದ ಜನರ ಮಾತನ್ನು ದುರ್ಲಕ್ಷಿಸುವವನು ತಗ್ಗಿನಲ್ಲಿ ಬೀಳುವನು. ಅರ್ಜುನಾ, ನಿನಗೆ ಹೆಚ್ಚಿಗೆ ಹೇಳುವದೇನಿದೆ? ದೇವರಲ್ಲಿ ನಿನ್ನ ಶ್ರದ್ಧಾ ಭಕ್ತಿಗಳು ಅಚಲವಾಗಿರಲಿ; ಎಂದು ಉಪದೇಶಿಸಿ ಸುಮ್ಮನಾದರು. ಪಾಂಡವರು ಪಿತಾಮಹರ ಅನುಮತಿಯನ್ನು ಪಡೆದು ಶಿಬಿರಕ್ಕೆ ಹೊರಟು ಹೋದರು. ಭೀಷ್ಮರು ಅರ್ಜುನನಿಗೆ ಉಪದೇಶಿಸುತ್ತಿರುವಾಗ ದುರ್ಯೋಧನನು ಅಲ್ಲಿಯೇ ಕೇಳುತ್ತ ಇದ್ದನು, ಒಳಗೊಳಗೇ ಸಂತಾಪಬಡುತ್ತಿದ್ದನು.

ಭೀಷ್ಮರು ದುರ್ಯೋಧನನ ದು:ಖಿತ ಮುದ್ರೆಯನ್ನು ಕಂಡು--ಮಗನೇ, ನಾನು ಬಹುಕಾಲದಿಂದ ನಿನ್ನ ಅನ್ನವನ್ನುಂಡಿರುವೆನು. ಆದುದರಿಂದ ನಾನು ನಿನ್ನ ಹಿತವನ್ನು ಕೋರುವೆನು. ಕುರುಕುಲಕ್ಕೆ ಕಲ್ಯಾಣವನ್ನು ಕೋರುವದೇ ನನ್ನ ಜೀವನದ ಧ್ಯೇಯವು. ನಾನು ಅರಸುಮಗನಾಗಿದ್ದರೂ ಯೌವನ ಸುಖದ ಅಭಿಲಾಷೆಯನ್ನು ತೊರೆದು ನಿಮ್ಮ ಕಲ್ಯಾಣವನ್ನೇ ಚಿಂತಿಸುತ್ತ ಬಂದಿರುವೆನು. ದುರ್ಯೋಧನಾ, ಈವೊತ್ತಿನವರೆಗೆ--ಮರಣಕಾಲದವರೆಗೆ-- ನಿನ್ನ ಅಪ್ಪಣೆಯನ್ನು ಪಾಲಿಸುತ್ತ ಬಂದಿರುವೆನು. ಮಗನೇ, ಈ ಯುದ್ಧದಲ್ಲಿ ನಿನಗೆ

ಜಯವು ದೊರೆಯಲಾರದೆಂದು ನಾನು ಭಾವಿಸಿರುವೆನು; ಅರ್ಜುನನ ಪರಾಕ್ರಮವನ್ನು ನೀನೇ ನಿನ್ನ ಕಣ್ಣಿಂದ ನೋಡಿರುವೆ. ಆದುದರಿಂದ ನೀನು ಈ ವೃದ್ಧನ ಮಾತನ್ನಾಲಿಸು, ಆಗ್ರಹಪಿಡಿಯಬೇಡ, ನನ್ನ ಅವಸಾನದೊಡನೆ ಯುದ್ಧದ ಅವಸಾನವಾಗಲಿ; ಇನ್ನು ಪರೀಕ್ಷೆ ಬೇಡ, ಸ್ವಜನ ಸಂಹಾರಕವಾದ ಈ ಯುದ್ಧವನ್ನು ಇನ್ನು ನೀನು ಬಿಟ್ಟುಬಿಡಬೇಕೆಂಬೇ ನನ್ನ ಸೂಚನೆಯುಂಟು. ಎಂದು ಹೇಳಿದರು.

ದುರ್ಯೋಧನನಿಗೆ ಹೇಳಬೇಕಾದುದನ್ನೆಲ್ಲ ಹೇಳಿದ ಬಳಿಕ ಭೀಷ್ಮಾಚಾರ್ಯರು ಇಹಲೋಕದ ತಮ್ಮ ಕರ್ತವ್ಯಗಳೆಲ್ಲ ತೀರಿದವೆಂದು ತಿಳಿದುಕೊಂಡು ಜೀವನವನ್ನು ಉಪಸಂಹರಿಸಿದರು. ಆಗಲೇ ಯೋಗಾರೂಢರಾಗಿ ಸಮಾಧಿಯನ್ನೇರಿಸಿದರು. ಯೋಗ್ಯ ಕಾಲವು ಒದಗಲು ಅವರ ನಶ್ವರ ಶರೀರವು ಪಂಚಭೂತಗಳಲ್ಲಿ ಸೇರಿಹೋಯಿತು. ಭೀಷ್ಮರ ಸಂಗಡವೇ ಕೌರವರ ಜಯಲಕ್ಷ್ಮಿಯೂ ಕೊನೆಯ ಅಪ್ಪಣೆಯನ್ನು ಪಡೆದುಕೊಂಡು ಹೊರಟು ಹೋದಳು. ಕೌರವರ ಪಾಳಯದಲ್ಲಿ ಹಾಹಾಕಾರವೆದ್ದಿತು.

ಭೀಷ್ಮಾಚಾರ್ಯರು ನಿರ್ಯಾಣ ಹೊಂದಿ ಸ್ವರ್ಗವನ್ನೇರಲು ದೇವದುಂದುಭಿಗಳು ಮೊಳಗಿದವು. ದೇವತೆಗಳು ಜಯಜಯಕಾರದೊಡನೆ ಸಂಭ್ರಮದಿಂದ ಭೀಷ್ಮರಿಗೆ ಸ್ವಾಗತ ಮಾಡಿದರು.

÷ ÷ ÷

ಭಿಷ್ಮಾಚಾರ್ಯರ ತರುವಾಯ ಅವರಂತೆ ಪಿತೃಭಕ್ತರೂ, ಸ್ವಾರ್ಥತ್ಯಾಗಿಗಳೂ, ಸತ್ಯಸಂಧರೂ ಆದ ಮಹಾಪುರುಷರು ಇನ್ನೊಬ್ಬರು ಈ ಜಗತ್ತಿನಲ್ಲಿ ಹುಟ್ಟಿಲ್ಲ. ಈ ಮಹಾಪುರುಷರು ಯೌವನದಲ್ಲಿ ತಂದೆಯ ಸಲುವಾಗಿ ಎಲ್ಲಾ ಸುಖೇಚ್ಛೆಗಳನ್ನು ಸಮೂಲವಾಗಿ ನಾಶಪಡಿಸಿ ಬ್ರಹ್ಮಚರ್ಯವ್ರತವನ್ನು ಕೈಕೊಂಡು ಆಮರಣ ಒಬ್ಬ ಯೋಗಿಯಂತೆ ತಮ್ಮ ಜೀವನ ಕ್ರಮವನ್ನು ಸಾಗಿಸಿದರು. ಮತ್ತು ತಾವು ಅಸಾಧಾರಣವೀರರೆನಿಸಿದ್ದರೂ ಸತ್ಯಕ್ಕೆ ಮಾನ ಕೊಟ್ಟು ತಮ್ಮ ಸತ್ಯಶೀಲತೆಯನ್ನು ಕಾದುಕೊಳ್ಳುವದಕ್ಕೋಸ್ಕರ ಕೊನೆಯವರೆಗೂ ಅನ್ಯರ ಅನುಮತಿಯಂತೆ ನಡೆಯುವದಕ್ಕೆ ಹಿಂದು ಮುಂದೆ ನೋಡಲಿಲ್ಲ. ಕರ್ತವ್ಯನಿಷ್ಠೆ, ಈಶ್ವರಭಕ್ತಿ, ಸ್ವಾರ್ಥತ್ಯಾಗ ಈ ಗುಣಗಳಲ್ಲಿ ಈ ಮಹಾಪುರುಷನಿಗೆ ಸಮಾನರಾದವರು ಈ ಜಗತ್ತಿನಲ್ಲಿ ಇನ್ನಾರೂ ಆಗಲಿಲ್ಲ. ಎಷ್ಟೋ ಸಾವಿರ ವರ್ಷಗಳು ಆಗಿ ಹೋದವು; ಎಷ್ಟೋ ರಾಜ್ಯಗಳು ಎದ್ದವು, ಬಿದ್ದವು; ಆದರೂ ಎಲ್ಲಾ ನಾಗರಿಕ ಸಮಾಜವು ವಿಸ್ಮಯದಿಂದಲೂ, ಭಕ್ತಿಯಿಂದಲೂ ಈ ಮಹಾಪುರುಷನ ಅಸಾಮಾನ್ಯಗುಣಗಳಿಗಾಗಿ ಈತನಿಗೆ ತಲೆವಾಗುತ್ತಿರುವದು. ವಿಲಕ್ಷಣವಾದ ಆತ್ಮಸಂಯಮನ, ಅಸಾಧಾರಣವಾದ ಪರಹಿತದಕ್ಷತೆ, ಅಪೂರ್ವವಾದ ಸತ್ಯಸಂಧತೆ ಈ ಗುಣಗಳಲ್ಲಿ ಭಿಷ್ಮಾಚಾರ್ಯರಿಗೆ ಸಮಾನನಾದ ಪುರುಷ ಸಿಂಹನು ಯಾವಕಾಲದಲ್ಲಿಯೂ ಯಾವದೇಶದಲ್ಲಿಯೂ ಉತ್ಪನ್ನನಾಗಿಲ್ಲ.

# ಕರ್ನಾಟಕ ಹಿತೈಷಿಣೀ ಗ್ರಂಥಮಾಲೆ ಸಚಿತ್ರ



ಉದಾತ್ತವಾದ ನೈತಿಕತತ್ವಗಳನ್ನು ಸುಲಭವಾದ ಐತಿಹಾಸಿಕ ಹಾಗು ಪೌರಾಣಿಕ ಕಥೆಗಳ ರೂಪದಿಂದ ಬರೆದು ಅಲ್ಲಲ್ಲಿಗೆ ಮನೋಹರವಾದ ಚಿತ್ರಗಳನ್ನು ಸೇರಿಸಿ ಆರಾರು ತಿಂಗಳಿಗೊಂದರಂತೆ ಪ್ರತಿವರ್ಷ ಎರಡು ಸರ್ವಾಂಗಸುಂದರವಾದ ಗ್ರಂಥಗಳನ್ನು ಪ್ರಕಟಿಸುವೆವು. ಅವುಗಳಲ್ಲಿ ೧ ಪೌರಾಣಿಕ, ೧ ಐತಿಹಾಸಿಕ ಕಥೆಗಳಿರುವವು. ಗ್ರಂಥ ಮಾಲೆಯ ಕಾಯಂ ವರ್ಗಣೀದಾರರಿಗೆ ಎಲ್ಲ ಗ್ರಂಥಗಳನ್ನು $\frac{3}{4}$ ಬೆಲೆಗೆ ಕೊಡುವೆವು. ಅಂಥವರು ಮಾಲೆಯಲ್ಲಿ ಪ್ರಕಟವಾಗುವ ಎಲ್ಲ ಗ್ರಂಥಗಳನ್ನು ಕೊಂಡುಕೊಳ್ಳುವೆವೆಂದು ಒಪ್ಪಿಕೊಂಡು ಎಂಟಾಣೆ ಪ್ರವೇಶಫೀಯನ್ನು ಕೊಟ್ಟು ತಮ್ಮ ಹೆಸರನ್ನು ರಜಿಷ್ಟರ ಮಾಡಿಸಿಕೊಳ್ಳಬೇಕಾಗುವದು ಇಂದಿನವರೆಗೆ ಪ್ರಕಟಿಸಲ್ಪಟ್ಟ ಗ್ರಂಥಗಳು:-

| | | | | |
|---|---|---|---|---|
| (೧) | ಸಾವಿತ್ರೀಸತ್ಯವಾನ- ಮೂರನೆಯ ಮುದ್ರಣ ಪೌ. ಕಥೆ | ೦ | ೧೨ | ೦ |
| (೨) | ಪದ್ಮಿನಿ- ನಾಲ್ಕನೆಯ ಮುದ್ರಣ. ಐತಿಹಾಸಿಕ ಕಥೆ | ೦ | ೧೨ | ೦ |
| (೩) | ದಾಕ್ಷಾಯಿಣಿ- ದ್ವಿತೀಯ ಮುದ್ರಣ. ಪೌ. ಕಥೆ | ೦ | ೮ | ೦ |
| (೪) | ಮಹಾರಾಣಿ ಲಕ್ಷ್ಮೀಬಾಯಿ- ದ್ವಿತೀಯ ಮುದ್ರಣ ಐ. ಕಥೆ | ೧ | ೦ | ೦ |
| (೫) | ಪಾರ್ವತಿ (ದಾಕ್ಷಾಯಿಣಿಯ ಮುಂದಿನ ಭಾಗ) | ೦ | ೮ | ೦ |
| (೬) | ಕವಿತಾ ಕುಸುಮ ಮಂಜರಿ (ಖಂಡಕಾವ್ಯ) ಪ್ರಥಮ ಗುಚ್ಛ | ೦ | ೫ | ೦ |
| (೭) | ಕವಿತಾ ಕುಸುಮಮಂಜರಿ ,, ದ್ವಿತೀಯ ಗುಚ್ಛ | ೦ | ೫ | ೦ |
| (೮) | ಸತ್ಕಥಾ ಕುಸುಮಮಂಜರಿ- ಪ್ರಥಮ ಗುಚ್ಛ (ಶ್ರೀ ಸ್ವಾಮಿ ರಾಮಕೃಷ್ಣ ಪರಮಹಂಸರ ಚಿಕ್ಕ ಕಥೆಗಳು) | ೦ | ೪ | ೦ |
| (೯) | ಸತ್ಕಥಾ ಕುಸುಮ ಮಂಜರಿ- ,, ದ್ವಿತೀಯ ಗುಚ್ಛ | ೦ | ೪ | ೦ |
| (೧೦) | ,, ,, ,, ತೃತೀಯ ಗುಚ್ಛ | ೦ | ೪ | ೦ |
| (೧೧) | ಸತ್ಕಥಾ ಕುಸುಮ ಮಂಜರಿ ,, ಚತುರ್ಥ ಗುಚ್ಛ | ೦ | ೧೦ | ೦ |

**ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆಯ ಅಭಿಪ್ರಾಯಗಳು:—**

೧. ಶ್ರೀಯುತ ಕುರಡಿಯವರ ಗ್ರಂಥಗಳು ಭಾಷೆಯಲ್ಲಿಯೂ ಅಂದವಾದ ರೀತಿಯಲ್ಲಿಯೂ ಉತ್ತಮ ವರ್ಗಕ್ಕೆ ಸೇರಿದುವು.

೨. ಅಂದವಾದ ಮುದ್ರಣದ ರೀತಿಯಲ್ಲಿಯೂ ಅಚ್ಚಿನ ತಪ್ಪುಗಳು ಸಾಮಾನ್ಯವಾಗಿ ಇಲ್ಲದಿರುವುದರಲ್ಲಿಯೂ ಈ ಗ್ರಂಥಕರ್ತರ ಪುಸ್ತಕಗಳು ಕನ್ನಡಕ್ಕೆ ಭೂಷಣಪ್ರಾಯವಾಗಿರುವವು.

**ಪತ್ತೆ:— ವ್ಯವಸ್ಥಾಪಕ— ಶ್ರೀಸರಸ್ವತೀ ಮಂದಿರ ಮಾ**

**ಧಾರವಾಡ-**

## ಮುಂಬಯಿ ವಿದ್ಯಾಖಾತೆಯವರಿಂದ ಮಂಜೂರಾದ
## ಈ ಗ್ರಂಥಕರ್ತೃವಿನ ಬೇರೆ ಪುಸ್ತಕಗಳು

(೧) **ರಾಮಾಶ್ವಮೇಧ ಸಾರ ಸಂಗ್ರಹ**— ಇದು ಹಳಗನ್ನಡದ ಸುಪ್ರಸಿ ಗದ್ಯ ಕಾವ್ಯವಾದ ರಾಮಾಶ್ವಮೇಧದ ಸಾರವು. ವಿಸ್ತೃತ ಟಿಪ್ಪಣಿಯಿಂದ ಕೂಡಿದ್ದು. ಟೆಕ್ಸ್ಟ. ಪುಸ್ತಕದಂತೆ ಮಂಜೂರಾಗಿದೆ ೧ ೦ -

(೨) **ದುರ್ಗಸಿಂಹ ಪಂಚತಂತ್ರ ಸಾರ**— ದುರ್ಗಸಿಂಹ ಕವಿಯ ಪಂಚತಂತ್ರ ಸರಳಾನುವಾದವು. ವಿಸ್ತೃತ ಟಿಪ್ಪಣಿಯಿಂದ ಕೂಡಿದ್ದು. ಹಳಗನ್ನಡವನ್ನು ಅಭ್ಯಾ ಸಿಸುವವರಿಗೆ ಈ ಎರಡು ಪುಸ್ತಕಗಳು ಅತ್ಯುಪಯುಕ್ತವಾದುವು. ಟೆಕ್ಸ್ಟ. ಪು ಕದಂತೆ ಮಂಜೂರಾಗಿದೆ. ೧—೦

(೩) **ಅಶೋಕ**— ಬೌದ್ಧಯುಗದ ಧರ್ಮದ ಇತಿಹಾಸವನ್ನೊಳಗೊಂಡ ಭಾರತೀಯ ಚಕ್ರವರ್ತಿಯ ಚರಿತ್ರವು. ಟೆಕ್ಸ್ಟ ಪುಸ್ತಕದಂತೆ ಮಂಜೂರಾಗಿದೆ ೧ ೬ - ೦

(೪) **ಸತ್ಕಥಾಲಾಪ**— ಮನಸ್ಸಿನ ಮೇಲೆ ನೀತಿಯ ಒಂದೊಂದು ಮಾತಿನ ಪರಿಣಾ ಮವಾಗುವಂತೆ ಒಂದೊಂದು ಕಥೆಯನ್ನು ಸುಲಭ ಭಾಷೆಯಲ್ಲಿ ಬರೆದು ಸಂಗ್ರಹಿ ತವಾಗಿದೆ. ಟೆಕ್ಸ್ಟ. ಪುಸ್ತಕದಂತೆ ಮಂಜೂರಾಗಿದೆ ೦ - ೧೨ - ೦

(೫) **ಹಜರತ ಮಹಮ್ಮದ ಪೈಗಂಬರ**— ಮುಸಲ್ಮಾನಿ ಧರ್ಮ ಸ್ಥಾಪಕ ಪವಿತ್ರ ಚರಿತ್ರವು. ಪ್ರಾಯಿಜ್ ಲಾಯಬ್ರರಿಗಳಿಗಾಗಿ ಮಂಜೂರಾಗಿದೆ. ೦-೬-೦

(೬) **ಮೋಹರಮ್**— ಮೋಹರಮ್ಮದ ಶೋಕರಸಪೂರ್ಣವಾದ ಕಥೆ. ಪ್ರಾಯಿಜ್ ಲಾಯಬ್ರರಿಗಾಗಳಿಗಾಗಿ ಮಂಜೂರಾಗಿದೆ ೦ - ೩ - ೦

(೭) **ಮದುವೆ**— ಮದುವೆಯನ್ನು ಕುರಿತು ಹಿಂದು ಧರ್ಮವು ಹೇಳುವ ವಿಚಾ ಗಳು ೦ —೨—

(೮) **ಸತಿಯೂ, ಸುನೀತಿಯೂ** — ದಕ್ಷ ಪುತ್ರಿಯಾದ ಸತಿ, ಉತ್ತಾನಪಾದ ರಾಜ ಪತ್ನಿಯಾದ ಸುನೀತಿ ಈ ಪತಿವ್ರತೆಯರಿಬ್ಬರ ಸುರಸ ಚರಿತೆಗಳು. ೦ ೪ —

(೯) **ಭಾರತೀಯ ವಿದುಷಿಯರು**— ವೇದಕಾಲ ಮೊದಲ್ಗೊಂಡು ಅರ್ವಾಚೀ ಕಾಲದ ವರೆಗೆ ಆಗಿಹೋದ ವಿದುಷೀ ಸ್ತ್ರೀಯರ ಚರಿತ್ರೆಗಳು. ಪ್ರಾಯಿಜ್ ಯಬ್ರರಿಗಳಿಗಾಗಿ. ೦ — ೫

(೧೦) **ಜೈನ ಪದ್ಮ ಪುರಾಣ ಸಾರ**— ಜೈನರ ರಾಮಾಯಣದ ಸಾರವು. ಪ್ರಾ ಜ ಲಾಯಬ್ರರಿಗಳಿಗಾಗಿ ಮಂಜೂರಾಗಿದೆ. ೦ —೬—

(೧೧) **ಶೇರಶಹ**— ಪ್ರಸಿದ್ಧ ಪಠಾಣ ವೀರನಾದ ಶೇರಶಹನ ಚರಿತ್ರೆ ೦—೪ - ಪ್ರಾಯಿಜ ಲಾಯಬ್ರರಿಗಳಿಗಾಗಿ ಮಂಜೂರಾಗಿದೆ. ಸೆಕಂಡ್ ಎಡಿಶನ್

ಈ ಪುಸ್ತಕಗಳು ಗ್ರಂಥಕರ್ತರಲ್ಲಿಯೂ, ಕರ್ನಾಟಕ ವಿದ್ಯಾವರ್ಧಕ ಸಂಘದ ಯಲ್ಲಿಯೂ ದೊರೆಯುವವು.

... ... ... ಪುಸ್ತಕಗಳು ಮಂಜೂರಿಗೆ ಕಳಿಸಲ್ಪಟ್ಟಿಲ್ಲ.